ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 22 ಎಫ್‌ಜಿಎಲ್ 2020

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ: 11.03.2020

61
4/5
12/3/20

ಇವರಿಂದ

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು–560001.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 414ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ. 414/2020 ದಿನಾಂಕ: 04.03.2020

*****

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಗೌರಿಶಂಕರ್ ಡಿ.ಸಿ. (ತುಮಕೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 414ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

P.V. [signature]

(ಪಿ.ವಿ ಶ್ರೀನಿವಾಸನ್)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಅರಣ್ಯ–ಸಿ)

11/3/20

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 414
ಸದಸ್ಯರ ಹೆಸರು : ಶ್ರೀ ಗೌರಿಶಂಕರ್ ಡಿ.ಸಿ (ತುಮಕೂರು ಗ್ರಾಮಾಂತರ)
ಉತ್ತರಿಸುವ ದಿನಾಂಕ : 12/03/2020
ಉತ್ತರಿಸುವ ಸಚಿವರು : ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಅರಣ್ಯ ಪ್ರದೇಶದಲ್ಲಿ ವಿವಾ ರೆಸಾರ್ಟ್ ಅಕ್ರಮವಾಗಿ ಅರಣ್ಯ ಒತ್ತುವರಿ ಮಾಡಿಕೊಂಡು ರಸ್ತೆ ನಿರ್ಮಾಣ ಮಾಡಿ ಅರಣ್ಯ ನಾಶ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | M/s Viva Fernleaf Resort ರವರು ತುಮಕೂರು ಜಿಲ್ಲೆಯ ದೇವರಾಯನದುರ್ಗ ಮೀಸಲು ಅರಣ್ಯ ಪ್ರದೇಶದ ಸ.ನಂ. 1 ರಲ್ಲಿ ಕುರುಚಲು ಗಿಡಗಳು ಹಾಗೂ ಇನ್ನಿತರೆ ಗಿಡಗಂಟೆಗಳನ್ನು ಕಡಿದು ಜಾನುವಾರು ತಡೆಕಂದಕ ಮುಚ್ಚಿ ರೆಸಾರ್ಟ್‌ಗೆ ದಾರಿ ನಿರ್ಮಿಸಿಕೊಂಡಿರುವುದು ಇಲಾಖೆಯ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಯಾವ ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಈ ಸಂಬಂಧ ದಿನಾಂಕ: 18-09-2014 ರಲ್ಲಿ ಅರಣ್ಯ ಮೊಕದ್ದಮೆ ಸಂಖ್ಯೆ: 12/2014-15ನ್ನು ದಾಖಲಿಸಿದ್ದು ಅರಣ್ಯ ಮತ್ತು ಪರಿಸರಕ್ಕೆ ಉಂಟು ಮಾಡಿರುವ ನಷ್ಟಕ್ಕೆ ಮೌಲ್ಯ ಹಾಗೂ ದಂಡ ಸೇರಿ ರೂ. 22,000/- ಗಳ ರಾಜಿಶುಲ್ಕವನ್ನು ಪಾವತಿಸಿಕೊಂಡು ಸದರಿ ರಸ್ತೆಯನ್ನು ಸ್ಥಗಿತಗೊಳಿಸಿ ಪ್ರಕರಣ ಮುಕ್ತಾಯಗೊಳಿಸಲಾಗಿರುತ್ತದೆ.<br><br>M/s Viva Fernleaf Resort ರವರು ದೇವರಾಯನದುರ್ಗ ಮೀಸಲು ಅರಣ್ಯ ಪ್ರದೇಶದ ಸ.ನಂ. 1 ರಲ್ಲಿ ರಸ್ತೆ ನಿರ್ಮಿಸಿಕೊಳ್ಳಲು ಸಲುವಾಗಿ 0.4693 ಹೆಕ್ಟೇರ್ ಅರಣ್ಯ ಪ್ರದೇಶವನ್ನು 1980ರ ಅರಣ್ಯ (ಸಂರಕ್ಷಣಾ) ಕಾಯ್ದೆ ಸೆಕ್ಷನ್-2 ರಡಿಯಲ್ಲಿ ಅರಣ್ಯೇತರ ಉದ್ದೇಶಕ್ಕೆ ಬಿಡುಗಡೆಗೊಳಿಸುವಂತೆ ಕೋರಿರುವ ಪ್ರಸ್ತಾವನೆಯನ್ನು ಕೇಂದ್ರ ಸರ್ಕಾರದ ತಾತ್ವಿಕ (ಸ್ಟೇಜ್-I) ಅನುಮೋದನೆಗೆ ಕಳುಹಿಸಲಾಗುತ್ತಿದೆ. |
| ಇ) | ತುಮಕೂರು ಗ್ರಾಮಾಂತರದ ದೇವರಾಯನ ದುರ್ಗದ ಬೆಟ್ಟದ ಮೇಲೆ ಶಿಂಶಾ ರೆಸಾರ್ಟ್ ಆರಂಭವಾಗಿದ್ದು, ಅರಣ್ಯ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಐತಿಹಾಸಿಕ ಭಾತರಿ ಕೋಟೆಯನ್ನು ವಿರೂಪಗೊಳಿಸಿ ಅರಣ್ಯವನ್ನು ಅಕ್ರಮವಾಗಿ ಒತ್ತುವರಿ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತುಮಕೂರು ತಾಲ್ಲೂಕು, ಊರ್ಡಿಗೆರೆ ಹೋಬಳಿ, ದೇವರಾಯನದುರ್ಗ ಮೀಸಲು ಅರಣ್ಯ ಪ್ರದೇಶದ ವ್ಯಾಪ್ತಿಯಲ್ಲಿ ಯಾವುದೇ ರೆಸಾರ್ಟ್ ಸ್ಥಾಪನೆಯಾಗಿರುವುದಿಲ್ಲ. ದೇವರಾಯನದುರ್ಗದ ಬೆಟ್ಟದ ಮೇಲೆ ಸ್ಥಾಪಿಸಲಾಗಿರುವ ಶಿಂಶಾ ರಿಟ್ರೀಟ್ ರೆಸಾರ್ಟ್ ಪ್ರದೇಶವು ದೇವರಾಯನದುರ್ಗ ಮೀಸಲು ಅರಣ್ಯ ಪ್ರದೇಶದ ಸ.ನಂ. 1ರ ಗಡಿಯಿಂದ ಅಂದಾಜು 150 ಮೀಟರ್‌ಗಿಂತ ಹೆಚ್ಚಿನ ದೂರದಲ್ಲಿರುತ್ತದೆ. ಅರಣ್ಯ ಪ್ರದೇಶವು ಒತ್ತುವರಿಯಾಗಿರುವುದಿಲ್ಲ. |
| ಈ) | ಬಂದಿದ್ದಲ್ಲಿ, ರೆಸಾರ್ಟ್ ಮಾಲೀಕರ ಮೇಲೆ ಇನ್ನು ಏಕೆ ಕ್ರಮ ಕೈಗೊಂಡಿಲ್ಲ; ಕ್ರಮ ಕೈಗೊಂಡಿದ್ದರೆ; ಯಾವ ರೀತಿ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ: ಅಪಜೀ 22 ಎಫ್‌ಜಿಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಅಪಜೀ 24 ಎಫ್‌ಎಲ್‌ಎಲ್ 2020

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ: 11.03.2020

117
415
12/3/20

ಇವರಿಂದ

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು-560001.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1204ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ. 1204/2020 ದಿನಾಂಕ: 29.02.2020

*****

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಂಜುನಾಥ ಹೆಚ್.ಪಿ. (ಹುಣಸೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1204ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

P.V. [signature]

**(ಪಿ.ವಿ ಶ್ರೀನಿವಾಸನ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಅರಣ್ಯ-ಸಿ)

11/3/20

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1204 |
| ಸದಸ್ಯರ ಹೆಸರು | : | ಶ್ರೀ.ಮಂಜುನಾಥ ಹೆಚ್.ಪಿ (ಹುಣಸೂರು) |
| ಉತ್ತರಿಸುವ ದಿನಾಂಕ | : | 12/03/2020 |
| ಉತ್ತರಿಸುವ ಸಚಿವರು | : | ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ರಾಜ್ಯ ಅರಣ್ಯ ಪ್ರದೇಶದಲ್ಲಿ ತಂಬಾಕು ಸಂಶೋಧನೆಗಾಗಿ ತಂಬಾಕು ಮಂಡಳಿಗೆ, ಜಮೀನನ್ನು ಗುತ್ತಿಗೆ ಆಧಾರದಲ್ಲಿ ನೀಡಲಾಗಿದೆಯೇ; ಹಾಗಿದ್ದಲ್ಲಿ, ನೀಡಿರುವ ಉದ್ದೇಶ ಹಾಗೂ ಭೂಮಿಯ ವಿವರವನ್ನು ನೀಡುವುದು; | ಹೌದು<br><br>ಭಾರತೀಯ ಕೃಷಿ ಸಂಶೋಧನಾ ಪರಿಷತ್ (Indian Council of Agricultural Research)ನ ಅಂಗವಾದ ಕೇಂದ್ರೀಯ ತಂಬಾಕು ಸಂಶೋಧನಾ ಸಂಸ್ಥೆ, ರಾಜಮುಂಡ್ರಿ, ಆಂಧ್ರ ಪ್ರದೇಶ ಇವರಿಗೆ ಸರ್ಕಾರದ ಆದೇಶ ಸಂಖ್ಯೆ:ಎಫ್‌ಎಫ್‌ಡಿ 29 ಎಫ್‌ಎಲ್‌ಎಲ್ 79 ದಿನಾಂಕ 03.11.1979 ಮತ್ತು 24.06.1981 ರಲ್ಲಿ 99 ವರ್ಷಗಳ ಅವಧಿಗೆ ತಂಬಾಕು ಬೆಳೆಯ ಸಂಶೋಧನೆಗಾಗಿ ಹಾಗೂ ಸಂಶೋಧನೆಗೆ ಅವಶ್ಯವಿರುವ ಕಟ್ಟಡಗಳ ನಿರ್ಮಾಣಕ್ಕಾಗಿ (ಕಾರ್ಖಾನೆ, ಪ್ರಯೋಗಾಲಯ, ಸಿಬ್ಬಂದಿ ವಸತಿ ಗೃಹಗಳು) 60.00 ಹೆಕ್ಟೇರ್ ಅರಣ್ಯ ಪ್ರದೇಶವನ್ನು ಗುತ್ತಿಗೆಗೆ ನೀಡಿದೆ. |
| ಆ) | ಸದರಿ ಪ್ರದೇಶದಲ್ಲಿ ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆ; ಗುತ್ತಿಗೆ ನೀಡಿರುವುದು ಬಳಕೆಯಾಗುತ್ತಿದೆಯೇ; | ಮೇಲೆ ವಿವರಿಸಿದಂತೆ ತಂಬಾಕು ಬೆಳೆಯ ಸಂಶೋಧನೆಗಾಗಿ ಹಾಗೂ ಸಂಶೋಧನೆಗೆ ಅವಶ್ಯವಿರುವ ಕಟ್ಟಡಗಳ ನಿರ್ಮಾಣದ (ಕಾರ್ಖಾನೆ, ಪ್ರಯೋಗಾಲಯ, ಸಿಬ್ಬಂದಿ ವಸತಿ ಗೃಹಗಳು) ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿರುತ್ತದೆ.<br><br>ಗುತ್ತಿಗೆ ನೀಡಿರುವುದು ಬಳಕೆಯಾಗುತ್ತಿಲ್ಲ. |
| ಇ) | ಗುತ್ತಿಗೆ ನೀಡಲಾಗಿರುವ ಜಮೀನನ್ನು ಅರಣ್ಯ ಇಲಾಖೆ ವಾಪಸ್ಸು ಪಡೆಯುವ ಕುರಿತು ಇಲಾಖೆಗೆ ಪ್ರಸ್ತಾವನೆ ಸ್ವೀಕೃತವಾಗಿದೆಯೇ; ಸ್ವೀಕೃತವಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದ ಅಭಿಪ್ರಾಯವೇನು? | ಹೌದು<br><br>ಸರ್ಕಾರವು ಕೇಂದ್ರೀಯ ತಂಬಾಕು ಸಂಶೋಧನಾ ಸಂಸ್ಥೆಗೆ ಈ ಹಿಂದೆ ನೀಡಿರುವ ಗುತ್ತಿಗೆ ಅರಣ್ಯ ಪ್ರದೇಶವನ್ನು ಹಿಂಪಡೆಯಲು ನೋಟಿಸ್ ಜಾರಿ ಮಾಡಲಾಗಿದೆ.<br><br>ಅದಕ್ಕೆ ಸಂಸ್ಥೆಯು "-----the Council is not in favour of terminating the lease of the land at Sollepura, which is for a period of 99 years w.e.f. 15.02.1982" ಎಂದು ವಿವರಣೆ ನೀಡಿರುತ್ತಾರೆ.<br><br>ಪ್ರಸ್ತುತ ಪರಿಶೀಲನಾ ಹಂತದಲ್ಲಿರುತ್ತದೆ. |

ಸಂಖ್ಯೆ: ಅಪಜೀ 24 ಎಫ್‌ಎಲ್‌ಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 44 ಸಿಎಸ್‌ಸಿ 2020 ದಿನಾಂಕ: 11.03.2020.

207
CIS
12/3/20

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 968ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 968ಕ್ಕೆ ದಿನಾಂಕ: 12.03.2020 ರಂದು ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು, ಇಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 100 ಪ್ರತಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Sumathi 11/3/2020
(ಸುಮತಿ ಎಸ್.)
ಸರ್ಕಾರದ ಅಧೀನ ಕಾರ್ಯದರ್ಶಿ(ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.
3. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 968
ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)
ಉತ್ತರಿಸಬೇಕಾದ ದಿನಾಂಕ : 12.03.2020.
ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಾಂಪ್ರದಾಯಿಕವಾಗಿ ಚಿನ್ನ–ಬೆಳ್ಳಿ ಕುಶಲ ಕರ್ಮಿಗಳ ಅಭಿವೃದ್ಧಿ ನಿಗಮ ಮಂಡಳಿ ಸ್ಥಾಪಿಸಲು ಬೇಡಿಕೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಸಾಂಪ್ರದಾಯಕವಾಗಿ ಚಿನ್ನ–ಬೆಳ್ಳಿ ಕುಶಲಕರ್ಮಿಗಳ ಅಭಿವೃದ್ಧಿ ನಿಗಮ ಮಂಡಳಿ ಸ್ಥಾಪಿಸಲು ಬೇಡಿಕೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಆ) | ಬಂದಿದ್ದಲ್ಲಿ ನಿಗಮ ಮಂಡಳಿ ಸ್ಥಾಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ. |
| ಇ) | ರಾಜ್ಯಾದ್ಯಂತ ಚಿನ್ನ–ಬೆಳ್ಳಿ ಕೆಲಸಗಾರರ ಸಂಖ್ಯೆ ಎಷ್ಟು? (ಜಿಲ್ಲಾವಾರು ಅಂಕಿ ಅಂಶ ನೀಡುವುದು) | ರಾಜ್ಯಾದ್ಯಂತ ಸುಮಾರು 95,416ಗಳಷ್ಟು ಚಿನ್ನ ಬೆಳ್ಳಿ ಕೆಲಸಗಾರರಿರುತ್ತಾರೆ. ಜಿಲ್ಲಾವಾರು ಅಂಕಿ ಅಂಶಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |

ಸಿಐ 44 ಸಿಎಸ್‌ಸಿ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಅನುಬಂಧ

## ಜಿಲ್ಲಾವಾರು ಚಿನ್ನ ಬೆಳ್ಳಿ ಕೆಲಸಗಾರರ ವಿವರ

| # | ಜಿಲ್ಲೆ | ಚಿನ್ನ ಬೆಳ್ಳಿ ಕೆಲಸಗಾರರ ಸಂಖ್ಯೆ |
|---|---|---|
| 1 | ಬಾಗಲಕೋಟೆ | 164 |
| 2 | ಬೆಂಗಳೂರು (ನ) | 25,000 |
| 3 | ಬೆಂಗಳೂರು (ಗ್ರಾ) | 174 |
| 4 | ಬೆಳಗಾವಿ | 2,470 |
| 5 | ಬಳ್ಳಾರಿ | 325 |
| 6 | ಬೀದರ್ | 600 |
| 7 | ಚಾಮರಾಜನಗರ | 278 |
| 8 | ಚಿಕ್ಕಬಳ್ಳಾಪುರ | 685 |
| 9 | ಚಿಕ್ಕಮಗಳೂರು | 282 |
| 10 | ಚಿತ್ರದುರ್ಗ | 215 |
| 11 | ದಕ್ಷಿಣ ಕನ್ನಡ | 20,000 |
| 12 | ದಾವಣಗೆರೆ | 1,850 |
| 13 | ಧಾರವಾಡ | 895 |
| 14 | ಗದಗ | 150 |
| 15 | ಹಾಸನ | 1,860 |
| 16 | ಹಾವೇರಿ | 266 |
| 17 | ಕಲಬುರಗಿ | 720 |
| 18 | ಕೊಡಗು | 72 |
| 19 | ಕೋಲಾರ | 2,000 |
| 20 | ಕೊಪ್ಪಳ | 2,228 |
| 21 | ಮಂಡ್ಯ | 605 |
| 22 | ಮೈಸೂರು | 7,280 |
| 23 | ರಾಯಚೂರು | 3,375 |
| 24 | ರಾಮನಗರ | 435 |
| 25 | ಶಿವಮೊಗ್ಗ | 1,650 |
| 26 | ತುಮಕೂರು | 10,130 |
| 27 | ಉಡುಪಿ | 1,474 |
| 28 | ವಿಜಯಪುರ | 158 |
| 29 | ಉತ್ತರ ಕನ್ನಡ | 10,000 |
| 30 | ಯಾದಗಿರಿ | 75 |
|  | ಒಟ್ಟು | 95,416 |

ಜಂಟಿ ನಿರ್ದೇಶಕರು
(ಗ್ರಾ.ಕೈ & ಸ್ವ.ಉ.ಕಾ)

ಕರ್ನಾಟಕ ಸರ್ಕಾರ

ಸಂಖ್ಯೆ ಸಿಐ 146 ಎಂಎಂಎನ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ 11.03.2020.

129
- ಅ|೭
13|03|2020

ಇಂದ
ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ., ಜವಳಿ ಮತ್ತು ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ

ಮಾನ್ಯರೇ,

ವಿಷಯ : ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1881ಕ್ಕೆ ಉತ್ತರ ಒದಗಿಸುವ ಕುರಿತು

ಉಲ್ಲೇಖ: ತಮ್ಮ ಪತ್ರ ಸಂಖ್ಯೆ ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1881/ ದಿನಾಂಕ 02.03.2020.

-----

ಪ್ರಸ್ತಾಪಿತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಮಾನ್ಯ ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ. (ಅರಸೀಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1881ಕ್ಕೆ ಸರ್ಕಾರದ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

(ಶಿವಪ್ರಕಾಶ)
ಪೀಠಾಧಿಕಾರಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1881 |
| ಸದಸ್ಯರ ಹೆಸರು | ಶ್ರೀ ಶಿವಲಿಂಗೇಗೌಡ. ಕೆ.ಎಂ. (ಅರಸೀಕೆರೆ) |
| ಉತ್ತರಿಸಬೇಕಾದ ದಿನಾಂಕ | 13.03.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕಲ್ಲುಪುಡಿ ಘಟಕಗಳ ಸಂಖ್ಯೆ ಎಷ್ಟು; | ಪ್ರಸ್ತುತ ರಾಜ್ಯದಲ್ಲಿ 1682 ಕಲ್ಲುಪುಡಿ ಘಟಕಗಳ ಕಾರ್ಯಾಚರಣೆಗೆ ಲೈಸೆನ್ಸ್ ನೀಡಲಾಗಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ರಾಜ್ಯದಲ್ಲಿರುವ ಸುರಕ್ಷತಾ ವಲಯಗಳ ಸಂಖ್ಯೆ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸೆನ್ಸಿಂಗ್ ಮತ್ತು ನಿಯಂತ್ರಣಾ ಪ್ರಾಧಿಕಾರದಿಂದ 2973 ಕ್ರಷರ್ ಸುರಕ್ಷತಾ ವಲಯಗಳನ್ನು ಗುರುತಿಸಿ ಘೋಷಣೆ ಮಾಡಲಾಗಿದ್ದು, ಈ ಪೈಕಿ 1682 ಸುರಕ್ಷತಾ ವಲಯಗಳಲ್ಲಿ ಕ್ರಷರ್ ಲೈಸೆನ್ಸ್ ನೀಡಲಾಗಿರುತ್ತದೆ. |
| ಇ) | ಕಲ್ಲುಪುಡಿ ಘಟಕಗಳನ್ನು ಪ್ರಾರಂಭಿಸಲಿರುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣಾ ಅಧಿನಿಯಮ, 2011 ಹಾಗೂ ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ ನಿಯಂತ್ರಣಾ ನಿಯಮಾವಳಿ, 2012ರಂತೆ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸೆನ್ಸಿಂಗ್ ಮತ್ತು ನಿಯಂತ್ರಣಾ ಪ್ರಾಧಿಕಾರಕ್ಕೆ ಕ್ರಷರ್ ಘಟಕಗಳನ್ನು ಸ್ಥಾಪಿಸಲು ಪರವಾನಿಗೆ ನೀಡುವ ಅಧಿಕಾರ ಪ್ರತ್ಯಾಯೋಜಿಸಲಾಗಿದೆ. ಅದರಂತೆ ಕಲಂ 6(3)ರಂತೆ ಕಂದಾಯ, ಅರಣ್ಯ, ಗಣಿ ಮತ್ತು ಭೂವಿಜ್ಞಾನ ಇಲಾಖೆ ಹಾಗೂ ಕರ್ನಾಟಕ ರಾಜ್ಯ ಪರಿಸರ ಮಾಲಿನ್ಯ ನಿಯಂತ್ರಣಾ ಮಂಡಳಿ ಅಧಿಕಾರಿಗಳು ಕ್ರಷರ್ ಪರವಾನಗಿ ಕೋರಿ ಸಲ್ಲಿಸಿರುವ ಅರ್ಜಿತ ಪ್ರದೇಶವನ್ನು ಜಂಟಿ ಸ್ಥಳ ಪರಿಶೀಲನೆ ನಡೆಸಿ, ಕಲಂ 6 ಮತ್ತು 6-A ರಲ್ಲಿನ ಎಲ್ಲಾ ಷರತ್ತುಗಳು ಪಾಲನೆಯಾದಲ್ಲಿ ವರದಿ ನೀಡಿದ ನಂತರ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸೆನ್ಸಿಂಗ್ ಮತ್ತು ನಿಯಂತ್ರಣಾ ಪ್ರಾಧಿಕಾರದಿಂದ ಅರ್ಜಿತ ಪ್ರದೇಶವನ್ನು ಕ್ರಷರ್ ಸುರಕ್ಷಿತ ವಲಯವೆಂದು ಘೋಷಿಸಿ ಅಧಿಸೂಚನೆ ಹೊರಡಿಸಿ, 'ಫಾರಂ-ಬಿ1' ರಲ್ಲಿ ಅನುಪಾಲನಾ ಪ್ರಮಾಣ ಪತ್ರ ನೀಡಲಾಗುವುದು.<br>ಅರ್ಜಿದಾರರು, ಕರ್ನಾಟಕ ರಾಜ್ಯ ಪರಿಸರ ಮಾಲಿನ್ಯ ನಿಯಂತ್ರಣಾ ಮಂಡಳಿಯಿಂದ ಸಿಎಫ್ಇ (Consent for Establishment) ಹಾಗೂ ಸಿಎಫ್ಓ (Consent for Operation) ಪಡೆದು ಹಾಜರುಪಡಿಸಿದ ನಂತರ ಜಿಲ್ಲಾ ಕಲ್ಲುಪುಡಿ ಮಾಡುವ ಘಟಕಗಳ ಲೈಸೆನ್ಸಿಂಗ್ ಮತ್ತು ನಿಯಂತ್ರಣಾ ಪ್ರಾಧಿಕಾರದಿಂದ 'ಫಾರಂ-ಸಿ' (ಕ್ರಷರ್ ಲೈಸೆನ್ಸ್) ರಲ್ಲಿ ಕ್ರಷರ್ ಪರವಾನಗಿ ನೀಡಲಾಗುವುದು. |

ಸಂಖ್ಯೆ: ಸಿಐ 146 ಎಂಎಂಎನ್ 2020

(ಸಿ.ಸಿ. ಪಾಟೀಲ)

ಗಣಿ ಮತ್ತು ಭೂವಿಜ್ಞಾನ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 55 ಸಿಓಎಫ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 11.03.2020

174
U/S
12/3/20

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸೋಮಲಿಂಗಪ್ಪ.ಎಂ.ಎಸ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1366ಕ್ಕೆ ಉತ್ತರಗಳನ್ನು ಕಳುಹಿಸುವ ಬಗ್ಗೆ.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸೋಮಲಿಂಗಪ್ಪ.ಎಂ.ಎಸ್. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1366ಕ್ಕೆ ದಿನಾಂಕ:12.03.2020 ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ತಮಗೆ ಕಳುಹಿಸಿ ಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ

(ಜೆ.ಶೀಲಾಬಾಯಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ
ದೂರವಾಣಿ ಸಂಖ್ಯೆ: 080-22034611

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1366
2. ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ.ಎಂ.ಎಸ್.
3. ಉತ್ತರಿಸಬೇಕಾದ ದಿನಾಂಕ : 12.03.2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸಿರುಗುಪ್ಪ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ದೇಶನೂರು ಗ್ರಾಮದಲ್ಲಿ ಸಕ್ಕರೆ ಕಾರ್ಖಾನೆಯು ಮುಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ); | ಸಿರುಗುಪ್ಪ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ದೇಶನೂರು ಗ್ರಾಮದಲ್ಲಿರುವ ಮೆ।।ಎನ್‌ಎಸ್‌ಎಲ್ (ತುಂಗಭದ್ರ) ಶುಗರ್ಸ್ ಲಿ. ಈ ಕಾರ್ಖಾನೆಯು ಪ್ರಸಕ್ತ 2019-20ನೇ ಹಂಗಾಮಿನಲ್ಲಿ ಮುಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಹಾಗಿದ್ದರೆ, ಕಬ್ಬು ಬೆಳೆದ ರೈತಾಪಿ ವರ್ಗದವರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಕಾರ್ಖಾನೆ ವ್ಯಾಪ್ತಿಯಲ್ಲಿ ಪ್ರಸಕ್ತ ಹಂಗಾಮಿನಲ್ಲಿ ಅಂದಾಜು 35,000 ಮೆಟ್ರಿಕ್ ಟನ್ ಕಬ್ಬು ಲಭ್ಯವಾಗಲಿದೆ. ಸದರಿ ಕಾರ್ಖಾನೆಯು ಮುಚ್ಚಿರುವುದರಿಂದ ಈ ಕಬ್ಬನ್ನು ನೆರೆಯ ಸಕ್ಕರೆ ಕಾರ್ಖಾನೆಗಳಾದ ಮೈಲಾರ ಶುಗರ್ಸ್, ಬೀರಬ್ಬಿ ಹೂವಿನ ಹಡಗಲಿ ತಾಲ್ಲೂಕು, ವಿಜಯನಗರ ಶುಗರ್ಸ್ ಗಂಗಾಪುರ, ಮುಂಡರಗಿ ತಾಲ್ಲೂಕು ಮತ್ತು ಬಾಲಾಜಿ ಶುಗರ್ಸ್ ಲಿಮಿಟೆಡ್, ಯರಗಲ್ ಈ ಮೂರು ಸಕ್ಕರೆ ಕಾರ್ಖಾನೆಗಳಲ್ಲಿ ನುರಿಸುವ ಮೂಲಕ ಕಬ್ಬು ಬೆಳೆದ ರೈತರಿಗೆ ತೊಂದರೆಯಾಗದಂತೆ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>ಈ ಕಾರ್ಖಾನೆಯು 2020-21ನೇ ಸಾಲಿನಿಂದ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭಿಸಲು ಉದ್ದೇಶಿಸಿರುತ್ತದೆ. |
| ಇ | ಹಾಗಿದ್ದಲ್ಲಿ, ಕಾರ್ಖಾನೆ ಪುನರ್ ಪ್ರಾರಂಭಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ (ವಿವರ ನೀಡುವುದು) | |

ಸಂಖ್ಯೆ: ಸಿಐ 55 ಸಿಓಎಫ್ 2020

(ಅರಬೈಲ್ ಶಿವರಾಮ ಹೆಬ್ಬಾರ)
ಮಾನ್ಯ ಕಾರ್ಮಿಕ ಮತ್ತು ಸಕ್ಕರ ಸಚಿವರು

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು – 560001.
ದೂ. 080–22034625 ಫ್ಯಾಕ್ಸ್: 080–22353932

ಸಂಖ್ಯೆ: ಸಿಐ 69 ಎಸ್‌ಪಿಐ 2020 ದಿನಾಂಕ 11.03.2020

159
4/S
12/3/20

**ಇವರಿಂದ,**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ,
ಬೆಂಗಳೂರು–01.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ಅಂಚೆ ಪೆಟ್ಟಿಗೆ ಸಂಖ್ಯೆ: 5074,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀಮತಿ ರೂಪಕಲಾ ಎಂ. (ಕೆಜಿಎಫ್) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. 679ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಸಚಿವಾಲಯ ಇವರ ಅ.ಸ. ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/6ಅ/ಚುಗು–ಚುರ.ಪ್ರಶ್ನೆ/06/ 2020, ದಿನಾಂಕ 03.03.2020.

*****

ದಿನಾಂಕ 12.03.2020 ರಂದು ಉತ್ತರಿಸಬೇಕಾದ ಮೇಲ್ಕಾಣಿಸಿದ ವಿಧಾನಸಭೆಯ ಪ್ರಶ್ನೆಗೆ ಉತ್ತರಗಳ 100 ಪ್ರತಿಗಳನ್ನು ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

G. Nagaratnamma 11/3/2020
(ನಾಗರತ್ನಮ್ಮ .ಜಿ)
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 679

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀಮತಿ ರೂಪಕಲಾ ಎಂ. (ಕೆ.ಜಿ.ಎಫ್.)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 12.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆ, ಕೆ.ಜಿ.ಎಫ್.ನಲ್ಲಿದ್ದ ಭಾರತ್ ಗೋಲ್ಡ್ ಮೇನ್ಸ್ ಲಿಮಿಟೆಡ್ ಪ್ಯಾಕ್ಟರಿಯನ್ನು ಮುಚ್ಚಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಇದರಿಂದಾಗಿ ಈ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದು, ಕಾರ್ಮಿಕರು ಇಂದು ಉದ್ಯೋಗವಿಲ್ಲದೇ ಸಂಕಷ್ಟ ದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೋಲಾರ ಜಿಲ್ಲೆ, ಕೆ.ಜಿ.ಎಫ್. ತಾಲ್ಲೂಕಿನಲ್ಲಿರುವ ಭಾರತ್ ಗೋಲ್ಡ್ ಮೈನ್ಸ್ ಲಿಮಿಟೆಡ್ ಕಾರ್ಖಾನೆಗೆ ಸೇರಿದ ಒತ್ತುವರಿಯಿಲ್ಲದ ಖಾಲಿ ಭೂಮಿಯನ್ನು (unencumbered clear vacant land) ಬಿ.ಜಿ.ಎಂ.ಎಲ್.ನ ಯಾವುದೇ ಹೊಣೆಗಾರಿಕೆ / ಬಾಧ್ಯತೆಗಳು ಇಲ್ಲದಂತೆ ಕೈಗಾರಿಕಾ ವಲಯ ಸ್ಥಾಪನೆ ಮಾಡಲು ರಾಜ್ಯ ಸರ್ಕಾರಕ್ಕೆ ಬಿಟ್ಟುಕೊಡಲು ಸಹಮತಿ ಕೋರಿ ಸರ್ಕಾರವು ದಿನಾಂಕ 06.02.2019 ರಂದು ಗಣಿ ಸಚಿವಾಲಯ, ಭಾರತ ಸರ್ಕಾರಕ್ಕೆ ಪತ್ರ ಬರೆಯಲಾಗಿದೆ. ಭಾರತ ಸರ್ಕಾರದಿಂದ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲ.<br><br>ಕೋಲಾರ ಜಿಲ್ಲೆ, ಕೆ.ಜಿ.ಎಫ್. ತಾಲ್ಲೂಕಿನಲ್ಲಿ ಬಿ.ಇ.ಎಮ್.ಎಲ್ ಕಾರ್ಖಾನೆ ಸ್ಥಾಪಿಸಿ, ತನ್ನ ಬಳಿ ಹೆಚ್ಚುವರಿ ಇರುವ 973 ಎಕರೆ ಭೂಮಿಯನ್ನು ಖರೀದಿಸುವಂತೆ ಸರ್ಕಾರವನ್ನು ಕೋರಿರುತ್ತದೆ. ಈ ಬಗ್ಗೆ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 11.10.2019ರಂದು ಸಭೆ ನಡೆಸಲಾಗಿದ್ದು, ಹೆಚ್ಚುವರಿ ಜಮೀನನ್ನು ಸರ್ಕಾರಕ್ಕೆ ತೆಗೆದುಕೊಳ್ಳುವ ಕುರಿತು ಕಂದಾಯ ಇಲಾಖೆಯು ಕ್ರಮ ಕೈಗೊಳ್ಳಲು ತೀರ್ಮಾನಿಸಲಾಗಿದೆ. |
| ಇ) | ಬಂದಿದ್ದಲ್ಲಿ, ಇವರ ನಿರುದ್ಯೋಗ ನಿವಾರಣೆಗೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು; ಹಾಗಿದ್ದಲ್ಲಿ, ಇವರಿಗೆ ಪರ್ಯಾಯವಾಗಿ ಎಲ್ಲಿ ಉದ್ಯೋಗಾವಕಾಶವನ್ನು ಕಲ್ಪಿಸಲಾಗುವುದು; ಇಲ್ಲದಿದ್ದಲ್ಲಿ, ಕಾರಣಗಳೇನು (ವಿವರ ನೀಡುವುದು)? | |

ಸಿಐ 69 ಎಸ್‌ಪಿಐ 2020

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 68 ಹೆಚ್‌ಎಸ್‌ಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 11-03-2020

10 U/S
12/3/20

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1404ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1404ಕ್ಕೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ದಿನಾಂಕ:12-02-2020 ರಂದು ಸದನದಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಯ. ಶಿವಶಂಕರ್) 11/3/2020
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1404 |
| ಮಾನ್ಯ ಸದಸ್ಯರ ಹೆಸರು | ಶ್ರೀ ಐಹೊಳೆ.ಡಿ.ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ | 12–03–2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯ ಸರ್ಕಾರದ ಫಾರ್ಮಾಸಿಸ್ಟ್ ಸಂಘದಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರ ವೇತನ ಭತ್ಯೆಗಳ ಪರಿಷ್ಕರಣೆ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಪರಿಷ್ಕರಿಸಲಾಗುವುದು; | ರಾಜ್ಯ ಸರ್ಕಾರದ ಫಾರ್ಮಾಸಿಸ್ಟ್ ಸಂಘದಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರ ವೇತನ ಭತ್ಯೆಗಳ ಪರಿಷ್ಕರಣೆ ಕುರಿತು ಯಾವುದೇ ಪ್ರಸ್ತಾವನೆಗಳು ಸರ್ಕಾರದ ಮುಂದೆ ಇರುವುದಿಲ್ಲ.<br>ಆದರೆ, ಇಲಾಖೆಯಲ್ಲಿನ ಹಿರಿಯ ಫಾರ್ಮಾಸಿಸ್ಟ್‌ಗಳ ವೇತನ ಪರಿಷ್ಕರಣೆ ಕುರಿತಂತೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಪ್ರಸ್ತಾವನೆಯನ್ನು ತಿರಸ್ಕರಿಸಲಾಗಿದೆ.<br>ಹಾಗೂ ಇಲಾಖೆಯಲ್ಲಿನ ಫಾರ್ಮಾಸಿಸ್ಟ್ ವೃಂದಕ್ಕೆ ಶುಶ್ರೂಷಕ ವೃಂದಕ್ಕೆ ಸರಿಸಮಾನವಾದ ವೇತನ ನೀಡುವ ಕುರಿತಾದ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. |
| ಆ | ಇಲ್ಲದಿದ್ದಲ್ಲಿ ಕಾರಣಗಳೇನು? (ವಿವರ ನೀಡುವುದು) | |

ಸಂಖ್ಯೆ: ಆಕುಕ 68 ಹೆಚ್‌ಎಸ್‌ಎಂ 2020

(ಬಿ. ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಕರ್ನಾಟಕ ಸರ್ಕಾರ

**ಸಂಖ್ಯೆ: ಆಕುಕ 08 ಎಸ್.ಟಿ.ಕ್ಯೂ. 2020**

**ಕರ್ನಾಟಕ ಸರ್ಕಾರದ ಸಚಿವಾಲಯ**
**ವಿಕಾಸ ಸೌಧ,**
**ಬೆಂಗಳೂರು ದಿನಾಂಕ: 11/03/2020.**

202
4/5
12/3/20

**ಇವರಿಂದ ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ , ಬೆಂಗಳೂರು

ಮಾನ್ಯರೆ.

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಉಮಾನಾಥ .ಎ. ಕೋಟ್ಯಾನ್ (ಮೂಡಬಿದ್ರೆ)** ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ:**1608ಕ್ಕೆ** ಉತ್ತರಿಸುವ ಬಗ್ಗೆ

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಉಮಾನಾಥ .ಎ. ಕೋಟ್ಯಾನ್ (ಮೂಡಬಿದ್ರೆ)** ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ:**1608ಕ್ಕೆ** ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

11/03/2020

(ಹೆಚ್.ಸಿ. ಹರ್ಷರಾಣಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಕುಟುಂಬ ಕಲ್ಯಾಣ )

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **1608**

ಮಾನ್ಯ ಸದಸ್ಯರ ಹೆಸರು : ಶ್ರೀ ಉಮಾನಾಥ.ಎ.ಕೋಟ್ಯಾನ್ (ಮೂಡಬಿದ್ರೆ)

ಉತ್ತರಿಸ ಬೇಕಾದ ದಿನಾಂಕ : **12-03-2020**

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| 01 | ಸರ್ಕಾರವು ಅನುಷ್ಠಾನಗೊಳಿಸುತ್ತಿರುವ ಕೇಂದ್ರ ಪುರಸ್ಕೃತ ಮಾತೃ ಆರೋಗ್ಯ ಪಾಲನಾ ಯೋಜನೆಯಲ್ಲಿನ ಪ್ರಗತಿ ಕುರಿತಾದ ವಿವರಗಳೇನು; | ವಿವರಗಳನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ. |
| 02 | ಯಶಸ್ವಿ ಅನುಷ್ಠಾನದೊಂದಿಗೆ ರಾಜ್ಯದಲ್ಲಿ ಗರ್ಭಿಣಿಯರ ಸಾವಿರ ಸಂಖ್ಯೆಯನ್ನು ಕಡಿಮೆ ಮಾಡಿರುವ ಎಲ್ಲಾ ಯೋಜನಾನುಷ್ಠಾನದಲ್ಲೂ ದೇಶದಲ್ಲಿಯೇ ಪ್ರಥಮ ಸ್ಥಾನದಲ್ಲಿರುವಂತೆ ಸೇವಾ ನಿಷ್ಠೆಯನ್ನು ಹೊಂದಲು ಇಲಾಖೆಯ ಮಾದರಿ ಕಾರ್ಯಕ್ರಮಗಳೇನು; | ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| 03 | ಮಾತೃ ಆರೋಗ್ಯ ಪಾಲನಾ ಯೋಜನೆಯ ಮೂಲಕ ಎಷ್ಟು ಮಹಿಳೆಯರಿಗೆ ಯೋಜನಾನುಷ್ಠಾನ ಸೌಲಭ್ಯವನ್ನು ನೀಡಿದೆ? | ವಿವರಗಳನ್ನು **ಅನುಬಂಧ-3**ರಲ್ಲಿ ನೀಡಲಾಗಿದೆ. |

**ಕಡತ ಸಂಖ್ಯೆ: ಆಕುಕ 08 ಎಸ್‌ಟಿಕ್ಯೂ 2020**

(ಬಿ.ಶ್ರೀರಾಮುಲು)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

# ಅನುಬಂಧ–1

## ಮಾತೃ ಆರೋಗ್ಯ ಪಾಲನೆಯಲ್ಲಿ ಕೆಳಕಂಡ ಯೋಜನೆಗಳು ಕರ್ನಾಟಕ ರಾಜ್ಯದಲ್ಲಿ ಅನುಷ್ಠಾನಗೊಂಡಿರುತ್ತವೆ.

| ಕ್ರ ಸಂ | ಯೋಜನೆ | ಯೋಜನೆಯ ವಿವರ | ಪ್ರಗತಿ (ಬಳಕೆ ಮಾಡಿರುವ ಅನುದಾನ ಶೇಕಡಾ) |
|---|---|---|---|
| 1 | ಜನನಿ ಸುರಕ್ಷಾ ಯೋಜನೆ | ಇದು ಸಾಂಸ್ಥಿಕ ಹೆರಿಗೆಯನ್ನು ಪ್ರೋತ್ಸಾಹಿಸುವ ಯೋಜನೆಯಾಗಿದ್ದು, ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಹೆರಿಗೆಗಳಿಗೆ ಕ್ರಮವಾಗಿ ರೂ.700 ಮತ್ತು ರೂ.600ಗಳ ಪ್ರೋತ್ಸಾಹ ಧನವನ್ನು ಹೆರಿಗೆಯಾದ ಕೂಡಲೆ ನೀಡಲಾಗುತ್ತಿದೆ. | 2017–18 – 84%<br>2018–19 – 123%<br>2019–20– 118%<br>(ಜನವರಿ ಅಂತ್ಯದವರೆಗೆ) |
| 2 | ಜನನಿ ಶಿಶು ಸುರಕ್ಷಾ ಯೋಜನೆ | ಸರ್ಕಾರಿ ಆಸ್ಪತ್ರೆಯಲ್ಲಿ ನಗದು ರಹಿತ ಮಾತೃ ಆರೈಕೆಗಾಗಿ ರೂಪಿಸಿರುವ ಯೋಜನೆಯಾಗಿದ್ದು, ಎಲ್ಲಾ ವರ್ಗದ ಗರ್ಭಿಣಿಯರಿಗೆ ಊಟ, ಔಷಧೋಪಚಾರ, ಸಾರಿಗೆ ಹಾಗೂ ರಕ್ತ ಉಚಿತವಾಗಿ ನೀಡುವುದರೊಂದಿಗೆ, ಲ್ಯಾಬ್ ಪರೀಕ್ಷೆಗಳನ್ನು ಸಹ ಉಚಿತವಾಗಿ ನೆರವೇರಿಸಲಾಗುತ್ತಿದೆ. | 2017–18 – 91%<br>2018–19 – 125%<br>2019–20 – 62%<br>(ಜನವರಿ ಅಂತ್ಯದವರೆಗೆ) |
| 3 | ಪಿ.ಎಂ.ಎಸ್.ಎಂ.ಎ | ಪ್ರತಿ ತಿಂಗಳು 9ನೇ ತಾರೀಖಿನಂದು ಸರ್ಕಾರಿ ಆಸ್ಪತ್ರೆಗಳಲ್ಲಿ ವಿಶೇಷವಾಗಿ ಎಲ್ಲಾ ವರ್ಗದ ಗರ್ಭಿಣಿಯರಿಗೆ ತಜ್ಞರಿಂದ ಪ್ರಸವ ಪೂರ್ವ ಆರೈಕೆಯನ್ನು ಮಾಡಲಾಗುತ್ತಿದೆ. ವಿಶೇಷವಾಗಿ ತೊಡಕಿನ ಗರ್ಭಧಾರಣೆಗಳಿಗೆ ಹಾಗೂ 2ನೇ ಮತ್ತು 3ನೇ ತ್ರೈಮಾಸಿಕದ ಗರ್ಭಿಣಿಯರಿಗೆ ಹೆಚ್ಚು ಸಮಯವನ್ನು ಮೀಸಲಿಡಲಾಗಿದೆ. | ಯೋಜನೆಯ ಲಾಭ ಪಡೆದ ಗರ್ಭಿಣಿಯರ ಸಂಖ್ಯೆ:<br>2017–18 – 5,12,163<br>2018–19 – 4,90,886<br>2019–20 – 4,41,620<br>(ಫೆಬ್ರವರಿ ಅಂತ್ಯದವರೆಗೆ) |
| 4 | ವಿಶೇಷ ಎಂ.ಸಿ.ಹೆಚ್ ಆಸ್ಪತ್ರೆಗಳ ಸ್ಥಾಪನೆ | ರಾಜ್ಯದಲ್ಲಿ ವಿಶೇಷವಾಗಿ ಗರ್ಭಿಣಿಯರಿಗೆ ಮತ್ತು ನವಜಾತ ಶಿಶುಗಳಿಗೆ ಪ್ರತ್ಯೇಕವಾದ ಆಸ್ಪತ್ರೆಗಳನ್ನು ತೆರೆಯಲಾಗಿದೆ. ಇದರಿಂದ ಹೆರಿಗೆ ಪ್ರಕರಣಗಳನ್ನು ಸಮುದಾಯ ಮಟ್ಟದಲ್ಲೇ ಗುಣಾತ್ಮಕ ಸೇವೆಯನ್ನು ಪಡೆಯುವಂತಾಗಿದೆ. | 2013–14ನೇ ಸಾಲಿನಿಂದ 20 ಎಂ.ಸಿ.ಹೆಚ್ ಆಸ್ಪತ್ರೆಗಳನ್ನು ಕಾರ್ಯಗತಗೊಳಿಸಲಾಗಿದೆ.<br>(ಭೌತಿಕ ಪ್ರಗತಿ) |

| 5 | ಲಕ್ಷ್ಯ ಕಾರ್ಯಕ್ರಮ | ಸರ್ಕಾರಿ ಹೆರಿಗೆ ಆಸ್ಪತ್ರೆಗಳಲ್ಲಿ ಗುಣಾತ್ಮಕ ಸೇವೆಯನ್ನು ನೀಡಲು ಹಾಗೂ ತಾಯಿ ಮತ್ತು ನವಜಾತ ಶಿಶು ಮರಣವನ್ನು ಕಡಿಮೆ ಮಾಡಲು ಅನುಷ್ಠಾನ ಗೊಂಡಿರುವ ಯೋಜನೆಯಾಗಿರುತ್ತದೆ. ಈ ಯೋಜನೆಯನ್ನು ವಾರ್ಷಿಕ ಒಂದು ಸಾವಿರಕ್ಕಿಂತ ಹೆಚ್ಚು ಹೆರಿಗೆ ಸಂಭವಿಸುವ 124 ಆಸ್ಪತ್ರೆಗಳಲ್ಲಿ ಅನುಷ್ಠಾನ ಗೊಳಿಸಲಾಗಿದೆ. | 124 ಆಸ್ಪತ್ರೆಗಳ ಪೈಕಿ 30 ಆಸ್ಪತ್ರೆಗಳು ರಾಜ್ಯ ಮಟ್ಟದ ಹಾಗೂ 12 ಆಸ್ಪತ್ರೆಗಳು ರಾಷ್ಟ್ರ ಮಟ್ಟದ ಪ್ರಾಮಾಣ ಪತ್ರಗಳನ್ನು ಪಡೆದುಗೊಂಡಿರುತ್ತವೆ. (ಭೌತಿಕ ಪ್ರಗತಿ) |
|---|---|---|---|
| 6 | ಉಚಿತ ಕಬ್ಬಿಣಾಂಶ ಮತ್ತು ಫೋಲಿಕ್ ಆಸಿಡ್ ಮಾತ್ರೆಗಳು, ಕ್ಯಾಲ್ಸಿಯಂ ಮಾತ್ರೆಗಳು, ಆಲ್‌ಬೆಂಡಜೋಲ್ ಮಾತ್ರೆಗಳು, ಫೋಲಿಕ್ ಆಸಿಡ್ ಮಾತ್ರೆಗಳು ಮತ್ತು ಐರನ್ ಸುಕ್ರೋಸ್ ಇಂಜೆಕ್ಷನ್ ಪೂರೈಕೆ. | ಎಲ್ಲಾ ವರ್ಗದ ಗರ್ಭಿಣಿ ಮತ್ತು ಬಾಣಂತಿಯರಿಗೆ ಉಚಿತವಾಗಿ ಕಬ್ಬಿಣಾಂಶ, ಫೋಲಿಕ್ ಆಸಿಡ್ ಮಾತ್ರೆಗಳು, ಕ್ಯಾಲ್ಸಿಯಂ ಮಾತ್ರೆಗಳು ಮತ್ತು ಆಲ್‌ಬೆಂಡಜೋಲ್ ಮಾತ್ರೆಗಳನ್ನು ನೀಡಲಾಗುತ್ತಿದೆ. ಇದರಿಂದ ರಕ್ತಹೀನತೆ ಮತ್ತು ತಾಯಿ ಮರಣವು ಕಡಿಮೆಯಾಗುತ್ತಿದೆ. | 2019-20 ನೇ ಸಾಲಿನಲ್ಲಿ<br>ಐಎಫ್ಎ: ರೂ.277.00 ಲಕ್ಷ.<br>ಕ್ಯಾಲ್ಸಿಯಂ: ರೂ.364.00 ಲಕ್ಷ.<br>ಐರನ್‌ಸುಕ್ರೋಸ್: ರೂ.165.00 ಲಕ್ಷ.<br>ಫೋಲಿಕ್‌ಆಸಿಡ್: ರೂ.211.00 ಲಕ್ಷ.<br>ಆಲ್‌ಬೆಂಡಜೋಲ್:ರೂ.20.00 ಲಕ್ಷಗಳ ಅನುದಾನದ ಬಳಕೆ ಮಾಡಲಾಗಿದೆ.(ಆರ್ಥಿಕ ಪ್ರಗತಿ) |

# ಅನುಬಂಧ–2

ಭಾರತ ಸರ್ಕಾರವು 11 ನವೆಂಬರ್ 2019ರಂದು ಬಿಡುಗಡೆಗೊಳಿಸಿದ ಎಸ್.ಆರ್.ಎಸ್ ವರದಿಯಲ್ಲಿ "2015–2017ರ ಅವಧಿಯಲ್ಲಿ ಕರ್ನಾಟಕ ರಾಜ್ಯವು ಇಡೀ ರಾಷ್ಟ್ರದಲ್ಲೇ ಅತೀ ಹೆಚ್ಚು ತಾಯಿ ಮರಣವನ್ನು ತಡೆದಿರುವ ರಾಜ್ಯವಾಗಿದೆಯೆಂದು ತಿಳಿಸಿರುತ್ತದೆ. ಈ ಕೆಳಕಂಡ ಯೋಜನೆಗಳನ್ನು ರಾಜ್ಯದಲ್ಲಿ ಯಶಸ್ವಿಯಾಗಿ ಅನುಷ್ಠಾನಗೊಳಿಸಿರುವುದರಿಂದ ಉತ್ತಮ ಪ್ರಗತಿಯನ್ನು ಹೊಂದಲು ಸಾಧ್ಯವಾಗಿರುತ್ತದೆ:

1. ಜನನಿ ಸುರಕ್ಷಾ ಯೋಜನೆ.
2. ಜನನಿ ಶಿಶು ಸುರಕ್ಷಾ ಯೋಜನೆ.
3. ಪಿ.ಎಂ.ಎಸ್.ಎಂ.ಎ.
4. ವಿಶೇಷ ಎಂ.ಸಿ.ಹೆಚ್. ಆಸ್ಪತ್ರೆಗಳ ಸ್ಥಾಪನೆ.
5. ಲಕ್ಷ್ಯ ಕಾರ್ಯಕ್ರಮ.
6. ಉಚಿತ ಕಬ್ಬಿಣಾಂಶ ಮತ್ತು ಫೋಲಿಕ್ ಆಸಿಡ್ ಮಾತ್ರೆಗಳು, ಕ್ಯಾಲ್ಸಿಯಂ ಮಾತ್ರೆಗಳು ಮತ್ತು ಆಲ್‌ಬೆಂಡಜೋಲ್ ಮಾತ್ರೆಗಳ ಪೂರೈಕೆ.

**ಇಲಾಖೆಯಿಂದ ಕೈಗೊಂಡ ಮಾದರಿ ಕಾರ್ಯಕ್ರಮಗಳು ಕೆಳಕಂಡಂತಿರುತ್ತವೆ.**

1. ಆರು ತಿಂಗಳಿಗೊಮ್ಮೆ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯುವ ಎಲ್ಲಾ ಜಿಲ್ಲೆಯ ಜಿಲ್ಲಾ ಅಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ತಾಯಿ ಮರಣ ಪ್ರಮಾಣ ತಡೆಯುವ ಪ್ರಗತಿಯ ಬಗ್ಗೆ ವಿಶ್ಲೇಷಿಸುತ್ತದೆ.
2. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಕೈಗೊಳ್ಳುವ ವಿಭಾಗೀಯ ಮಟ್ಟದ ಪ್ರಗತಿ ಪರಿಶೀಲನಾ ಸಭೆಯಲ್ಲಿ ತಾಯಿ ಮರಣ ತಡೆಯುವ ಬಗ್ಗೆ ಜಿಲ್ಲೆಯು ಕೈಗೊಂಡಿರುವ ಪ್ರಗತಿಯನ್ನು ವಿಶ್ಲೇಷಣೆ ಮಾಡಲಾಗುತ್ತಿದೆ.
3. ಪ್ರತಿ ತಿಂಗಳಿಗೊಮ್ಮೆ ಎಲ್ಲಾ ಜಿಲ್ಲೆಯ ಆರ್.ಸಿ.ಹೆಚ್ ಅಧಿಕಾರಿಗಳ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸಲಾಗುತ್ತಿದೆ.
4. ಕರ್ನಾಟಕ ಸರ್ಕಾರವು ಗುಣಾತ್ಮಕ ಮಾತೃ ಆರೋಗ್ಯ ಪಾಲನೆಗೆ ಒತ್ತು ಕೊಟ್ಟು ಮಾನವ ಸಂಪನ್ಮೂಲವನ್ನು ಮಂಜೂರು ಮಾಡಿರುತ್ತದೆ ಮತ್ತು 24X7 ಎಫ್.ಆರ್.ಯು ಗಳನ್ನು ಕಾರ್ಯಗತಗೊಳಿಸಲಾಗಿರುತ್ತದೆ. ಎಫ್.ಆರ್.ಯು ಗಳಲ್ಲಿ ಸಮಗ್ರ ಗರ್ಭಿಣಿ, ಪ್ರಸೂತಿ ಆರೈಕೆ ಮತ್ತು ನವಜಾತ ಶಿಶು ಆರೈಕೆಯನ್ನು ಮಾಡಲಾಗುತ್ತಿದೆ. ಇದರಿಂದ ಗರ್ಭಿಣಿಗೆ ಪ್ರಸೂತಿ ಸಮಯದಲ್ಲಿ ಅವಶ್ಯವಿರುವ ಸಿಸೇರಿಯನ್ ವ್ಯವಸ್ಥೆಯನ್ನು ಸಹ ಒದಗಿಸಲಾಗಿದೆ.
5. ಇಲಾಖೆಯ ವೈದ್ಯರು, ಶುಶ್ರೂಷಕಿಯರು ಮತ್ತು ಇತರೆ ಸಿಬ್ಬಂದಿಯವರಿಗೆ ತಾಯಿ ಮರಣ ತಡೆಯುವ ಬಗ್ಗೆ ಹೆಚ್ಚು ಜಾಗೃತಿ ಮೂಡಿಸಲಾಗಿದೆ.
6. ವೈದ್ಯರು ಮತ್ತು ಶುಶ್ರೂಷಕಿಯರಿಗೆ ನೀಡಲಾಗುತ್ತಿರುವ ದಕ್ಷ ಮತ್ತು ದಕ್ಷತಾ ತರಬೇತಿಯು ಪರಿಣಾಮಕಾರಿಯಾಗಿರುತ್ತದೆ.

# ಅನುಬಂಧ–3

**ಕರ್ನಾಟಕ ರಾಜ್ಯದಲ್ಲಿ ಮಾತೃ ಆರೋಗ್ಯ ಪಾಲನೆಯಲ್ಲಿ ಕೆಳಗೆ ವಿವರಿಸಿದಂತೆ ಮಹಿಳೆಯರು ಸೌಲಭ್ಯವನ್ನು ಪಡೆದುಕೊಂಡಿರುತ್ತಾರೆ:**

1. ಜನನಿ ಸುರಕ್ಷಾ ಯೋಜನೆ
   - 2017-18 - 282731
   - 2018-19 - 325197
   - 2019-20 –406375 (ಜನವರಿ ಅಂತ್ಯಕ್ಕೆ)

2. ಜನನಿ ಶಿಶು ಸುರಕ್ಷಾ ಕಾರ್ಯಕ್ರಮ.

| ಸೌಲಭ್ಯಗಳು | 2017–18 | 2018–19 | 2019–20 (ಜನವರಿ ಅಂತ್ಯದ ವರೆಗೆ) |
|---|---|---|---|
| | ಫಲಾನುಭವಿಗಳ ಸಂಖ್ಯೆ | | |
| ಔಷಧಿ | 415056 | 429874 | 351815 |
| ಊಟ | 355213 | 231462 | 187672 |
| ರಕ್ತದ ಬಾಟಲಿ | 19904 | 24360 | 18704 |
| ಸಾರಿಗೆ | 62226 | 64814 | 50500 |
| ರಕ್ತ ಪರೀಕ್ಷೆ ಮತ್ತು ಅಲ್ಟ್ರಾಸೌಂಡ್ | 422166 | 358197 | 283034 |

3. ಪಿ.ಎಂ.ಎಸ್.ಎಂ.ಎ
   - 2017–18 – 512163
   - 2018–19 – 490886
   - 2019–20 – 441620 (ಫೆಬ್ರವರಿ ಅಂತ್ಯಕ್ಕೆ)

ಕಾಇ 13 ಸಿಎಲ್‌ಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 11-03-2020

125
L/S
12/3/20

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು-01.

ಮಾನ್ಯರೆ,

ವಿಷಯ:- ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಎಲ್. (ಚಾಮರಾಜ) ಅವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1602ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭಾ ಸದಸ್ಯರಾದ ಶ್ರೀ ನಾಗೇಂದ್ರ ಎಲ್. (ಚಾಮರಾಜ) ಅವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1602 ರ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Girija

(ಗಿರಿಜಮ್ಮ)
ಪೀಠಾಧಿಕಾರಿ-06
ಕಾರ್ಮಿಕ ಇಲಾಖೆ (ಬಾಕಾಕೋ)

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1602
2. ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್. (ಚಾಮರಾಜ)
3. ಉತ್ತರಿಸುವ ದಿನಾಂಕ : 12-03-2020

ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಜಿಲ್ಲೆಯಲ್ಲಿ ಬಾಲ ಕಾರ್ಮಿಕರಿಗಾಗಿ ಎಷ್ಟು ವಸತಿ ಶಾಲೆಗಳಿವೆ; (ವಿವರ ಒದಗಿಸುವುದು) | ಮೈಸೂರು ಜಿಲ್ಲೆಯಲ್ಲಿ ಬಾಲಕಾರ್ಮಿಕರ ಪುನರ್ವಸತಿಗಾಗಿ ರಾಷ್ಟ್ರೀಯ ಬಾಲಕಾರ್ಮಿಕ ಯೋಜನೆಯಡಿ(ಎನ್.ಸಿ.ಎಲ್.ಪಿ) ಬಾಲ್ಯಾವಸ್ಥೆಯ ಹಾಗೂ ಕಿಶೋರಾವಸ್ಥೆಯ ಕಾರ್ಮಿಕರ 01 (ಒಂದು) ವಿಶೇಷ ತರಬೇತಿ ಕೇಂದ್ರವು ಕಾರ್ಯ ನಿರ್ವಹಿಸುತ್ತಿದ್ದು, ವಿವರ ಕೆಳಕಂಡಂತಿದೆ;<br>ನಿಸರ್ಗ ಬಾಲಕಾರ್ಮಿಕ ಪುನರ್ವಸತಿ ಕೇಂದ್ರ,<br>ಹೆಂಚಿನಮನೆ, ಬೆಳಗನಹಳ್ಳಿ ರಸ್ತೆ,<br>ಹೆಚ್. ಡಿ. ಕೋಟೆ, ಮೈಸೂರು. |
| ಆ | ಬಾಲ ಕಾರ್ಮಿಕರ ವಿದ್ಯಾಭ್ಯಾಸ ಮತ್ತು ಪುನರ್ವಸತಿಗಾಗಿ ಸರ್ಕಾರವು ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; (ವಿವರ ನೀಡುವುದು) | **ಬಾಲ ಕಾರ್ಮಿಕರ ವಿದ್ಯಾಭ್ಯಾಸ ಮತ್ತು ಪುನರ್ವಸತಿಗಾಗಿ ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿದೆ:-**<br>• ಬಾಲಕಾರ್ಮಿಕ ಮತ್ತು ಕಿಶೋರ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ 1986ರಡಿ ದೂರು ಆಧಾರಿತ ಹಾಗೂ ಹಠಾತ್ ದಾಳಿಗಳನ್ನು ನಡೆಸಿ ಕೆಲಸದಲ್ಲಿ ತೊಡಗಿರುವ ಬಾಲಕಾರ್ಮಿಕರನ್ನು ಬಿಡುಗಡೆಗೊಳಿಸಿ ಅಗತ್ಯತೆ ಆಧರಿಸಿ ಬಾಲಕಾರ್ಮಿಕರ ವಿಶೇಷ ತರಬೇತಿ ಕೇಂದ್ರಕ್ಕೆ, ಮಕ್ಕಳ ಕಲ್ಯಾಣ ಸಮಿತಿ (ಸಿಡಬ್ಲೂಸಿ) ಮತ್ತು ಮುಖ್ಯವಾಹಿನಿ ಶಾಲೆಗಳಿಗೆ ದಾಖಲಿಸಲಾಗಿರುತ್ತದೆ ಹಾಗೂ ತಪ್ಪಿತಸ್ಥ ಮಾಲೀಕರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತದೆ.<br>• ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಮೈಸೂರು ಜಿಲ್ಲೆಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೇಂದ್ರ ಸರ್ಕಾರದ ರಾಷ್ಟ್ರೀಯ ಬಾಲಕಾರ್ಮಿಕ ಯೋಜನೆ (ಎನ್.ಸಿ.ಎಲ್.ಪಿ) ಜಾರಿಯಲ್ಲಿರುತ್ತದೆ. ಈ ಯೋಜನೆಯ ಮೂಲಕ ಬಾಲಕಾರ್ಮಿಕ ಮತ್ತು ಕಿಶೋರ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯ್ದೆ 1986 ಅನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಮಾಡಲಾಗುತ್ತಿದೆ.<br>• ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾ ಬಾಲಕಾರ್ಮಿಕ |

| | | ಯೋಜನಾ ಸೊಸೈಟಿ ಹಾಗೂ ಕಾರ್ಮಿಕ ಇಲಾಖೆ, ಶಿಕ್ಷಣ ಇಲಾಖೆ, ಪೊಲೀಸ್ ಇಲಾಖೆ, ಕಂದಾಯ ಇಲಾಖೆ, ಮಹಿಳಾ ಮಕ್ಕಳ ಕಲ್ಯಾಣ ಇಲಾಖೆ ಹಾಗೂ ಇತರೆ ಸಂಬಂಧಿಸಿದ ಇಲಾಖೆಗಳ ಸಹಯೋಗದೊಂದಿಗೆ ಜಿಲ್ಲಾದ್ಯಂತ ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ ಕುರಿತಾಗಿ ಕಾನೂನು ಅರಿವು ಕಾರ್ಯಕ್ರಮಗಳು, ಬೀದಿ ನಾಟಕಗಳು, ಕರಪತ್ರ ಹಂಚುವಿಕೆ ಹಾಗೂ ಆಟೋ ಪ್ರಚಾರದ ಮೂಲಕ ಜಾಗೃತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. |
|---|---|---|
| ಇ | ಕಳೆದ 3 ವರ್ಷಗಳಲ್ಲಿ ಬಾಲ ಕಾರ್ಮಿಕ ಪ್ರಕರಣಗಳಿಗೆ ಸಂಬಂಧಿಸಿದಂತೆ ಮೈಸೂರು ಜಿಲ್ಲೆಯಲ್ಲಿ ಎಷ್ಟು ಮೊಕದ್ದಮೆಗಳನ್ನು ದಾಖಲಿಸಲಾಗಿದೆ ಮತ್ತು ಕೈಗೊಂಡಿರುವ ಕ್ರಮಗಳೇನು? (ವಿವರ ಒದಗಿಸುವುದು) | ಮೈಸೂರು ಜಿಲ್ಲೆಯಲ್ಲಿ ಕಳೆದ ಮೂರು(3) ವರ್ಷಗಳಲ್ಲಿ ಬಾಲಕಾರ್ಮಿಕ ಪ್ರಕರಣಗಳಿಗೆ ಸಂಬಂಧಿಸಿದಂತೆ ತಪ್ಪಿತಸ್ಥ ಮಾಲೀಕರ ವಿರುದ್ಧ 34 ಮೊಕದ್ದಮೆಗಳನ್ನು ಸಕ್ಷಮ ನ್ಯಾಯಾಲಯಗಳಲ್ಲಿ ದಾಖಲಿಸಲಾಗಿದ್ದು, 02 ಪ್ರಕರಣಗಳು ವಿಲೇವಾರಿಯಾಗಿದ್ದು ಒಟ್ಟು ರೂ. 18,000/- ಮೊತ್ತದ ದಂಡವನ್ನು ತಪ್ಪಿತಸ್ಥ ಮಾಲೀಕರಿಗೆ ವಿಧಿಸಲಾಗಿರುತ್ತದೆ. ಉಳಿದ 32 ಪ್ರಕರಣಗಳು ನ್ಯಾಯಾಲಯದಲ್ಲಿ ವಿಚಾರಣೆಗೆ ಬಾಕಿ ಇರುತ್ತವೆ.<br>ಮೈಸೂರು ಜಿಲ್ಲೆಯಲ್ಲಿ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗೆ ಸಂಬಂಧಿಸಿದಂತೆ ಇಲಾಖೆಯು ಕೈಗೊಂಡಿರುವ ಕಾನೂನಾತ್ಮಕ ಕ್ರಮಗಳ ಕುರಿತಾದ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ. |

**ಸಂಖ್ಯೆ: ಕಾಇ 13 ಶಿಎಲ್‌ಶಿ 2020**

(ಅರಬೈಲ್ ಶಿವರಾಮ್ ಹೆಬ್ಬಾರ್)
ಕಾರ್ಮಿಕ & ಸಕ್ಕರೆ ಸಚಿವರು.

# ಅನುಬಂಧ

| ವರ್ಷ | ನಡೆಸಲಾದ ತಪಾಸಣೆಗಳು | ರಕ್ಷಿಸಿದ ಬಾಲಕಾರ್ಮಿಕರ ಸಂಖ್ಯೆ | ಉಲ್ಲಂಘನೆಯಾದ ಪ್ರಕರಣಗಳ ಸಂಖ್ಯೆ | ಮೊಕದ್ದಮೆ ದಾಖಲಿಸಲಾದ ಪ್ರಕರಣಗಳು | ಶಿಕ್ಷೆಯಾದ ಪ್ರಕರಣಗಳು | ವಸೂಲಾತಿಯಾದ ದಂಡ/ಶಿಕ್ಷೆ (ರೂ. ಗಳಲ್ಲಿ) | ಷರಾ |
|---|---|---|---|---|---|---|---|
| 2017-18 | 106 | 16 | 16 | 13 | --- | --- | 13 ಪ್ರಕರಣಗಳು ನ್ಯಾಯಾಲಯದಲ್ಲಿ ವಿಚಾರಣೆಗೆ ಬಾಕಿ ಇರುತ್ತವೆ. |
| 2018-19 | 452 | 14 | 14 | 14 | 01 | 10,000=00 | 13 ಪ್ರಕರಣಗಳು ನ್ಯಾಯಾಲಯದಲ್ಲಿ ವಿಚಾರಣೆಗೆ ಬಾಕಿ ಇರುತ್ತವೆ. |
| 2019-20 (ಫೆಬ್ರವರಿ 2020 ರ ಅಂತ್ಯಕ್ಕೆ) | 342 | 24 | 24 | 07 | 01 | 8,000=00 | 06 ಪ್ರಕರಣಗಳು ನ್ಯಾಯಾಲಯದಲ್ಲಿ ವಿಚಾರಣೆಗೆ ಬಾಕಿ ಇರುತ್ತವೆ. |
| ಒಟ್ಟು | 900 | 54 | 54 | 34 | 02 | 18,000=00 | |

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ /8/ಎಂವಿವಿ /2020(ಇ)

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 11.03.2020

69
ULS
12/03/2020

ಇವರಿಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ ಇಲಾಖೆ),
ಬೆಂಗಳೂರು-560 001.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :- ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ), ಮಾನ್ಯ ವಿಧಾನ ಸಭಾ ಸದಸ್ಯರು, ಇವರ ಚುಕ್ಕೆ ಗುರ್ತಿಲ್ಲದ ಪ್ರಶ್ನೆ ಸಂಖ್ಯೆ: 420ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ:- ತಮ್ಮ ಸೂಚನಾ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.420/2020, ದಿನಾಂಕ:29-02-2020.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ, ಉಲ್ಲೇಖಿತ ಸುಚನಾ ಪತ್ರದಲ್ಲಿ ತಿಳಿಸಿದಂತೆ, ವಿಧಾನ ಸಭೆಯ 6ನೇ ಅಧಿವೇಶನದಲ್ಲಿ ಮಾನ್ಯ ಸದಸ್ಯರಾದ ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ), ಇವರಿಂದ ಪ್ರಸ್ತಾಪಿಸಲ್ಪಟ್ಟು ಸದನದಲ್ಲಿ ದಿನಾಂಕ: 12-03-2020ರಂದು ಮಂಡಿಸಲಾಗುತ್ತಿರುವ ಚುಕ್ಕೆ ಗುರುತಿಲ್ಲದ ಪ್ರ.ಸಂ: 420ಕ್ಕೆ ಉತ್ತರಗಳ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

Shilpa
(ಶಿಲ್ಪ ಕೆ)
ಶಾಖಾಧಿಕಾರಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು-02)

11/3/2020

# ಕರ್ನಾಟಕ ವಿಧಾನಸಭೆ

15ನೇ ವಿಧಾನ ಸಭೆ

6ನೇ ಅಧಿವೇಶನ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 420

ಮಾನ್ಯ ಸದಸ್ಯರ ಹೆಸರು: ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ)

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

ಉತ್ತರಿಸಬೇಕಾದ ದಿನಾಂಕ: 12-03-2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮಹಿಳಾ ಪ್ರಥಮ ದರ್ಜೆ ಕಾಲೇಜುಗಳನ್ನು ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಸಂಯೋಜಿಸಲು ತೀರ್ಮಾನಿಸಲಾಗಿದೆಯೇ; | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014ರನ್ವಯ ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಲಾಗಿರುತ್ತದೆ.<br><br>ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನದ ಪಿಎಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014ರ ಪ್ರಾರಂಭದ ದಿನಾಂಕದ ಮೊದಲು ಇತರ ಎಲ್ಲಾ ವಿಶ್ವವಿದ್ಯಾಲಯಗಳ ಯಾವುದೇ ವಿಶೇಷಾಧಿಕಾರ ಅಥವಾ ಸಂಯೋಜನೆಗೊಳಪಟ್ಟ ಎಲ್ಲಾ ಸರ್ಕಾರಿ ಮಹಿಳಾ ಕಾಲೇಜುಗಳು ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದ ಸಂಯೋಜನೆಗೊಳಪಡುತ್ತವೆ. |
| ಆ) | ಹಾಗಿದ್ದಲ್ಲಿ, ಇದರಿಂದಾಗಿ ಸಾಗರದ ಶ್ರೀಮತಿ ಇಂದಿರಾಗಾಂಧಿ ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು ಮತ್ತು ಸ್ನಾತಕೋತ್ತರ ಕೇಂದ್ರವು ಸುಮಾರು 400 ಕಿ.ಮೀ. ದೂರವಿದ್ದು, ಅಂಕಪಟ್ಟಿ, ಪದವಿ ಪ್ರಮಾಣ ಪತ್ರಗಳನ್ನು ತುರ್ತಾಗಿ ಪಡೆಯಲು ಸಾಧ್ಯವಾಗದೆ ಮತ್ತು ಅನಾವಶ್ಯಕ ಆರ್ಥಿಕ ಹೊರೆಯನ್ನು ಹೊರಬೇಕಾಗಿರುವುದು ಸರ್ಕಾರ ಗಮನಿಸಿದೆಯೇ; | ರಾಜ್ಯದ ಮಹಿಳೆಯರು ಕಲಿಕೆ ಮುಂದುವರೆಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆ ನಡೆಸುವುದರ ಪುರೋಭಿವೃದ್ಧಿಗಾಗಿ ವಿಜಯಪುರದ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸಿ ಜಾರಿಗೆ ತರಲಾಗಿರುವ ಕಾನೂನನ್ನು ಪಾಲಿಸುವುದು ಕಡ್ಡಾಯವಾಗುತ್ತದೆ.<br><br>ಈ ವಿಸ್ತರಣೆಯ ಧ್ಯೇಯೋದ್ದೇಶಗಳನ್ನು ಪರಿಗಣಿಸಿದಲ್ಲಿ ಉಳಿದ ವಿಷಯಗಳು ಗೌಣವಾಗುತ್ತವೆ. |

-2

1223191/2020

ಕರ್ನಾಟಕ ಸರ್ಕಾರ

ಕ್ರಮಾಂಕ: ಇಡಿ 111 ಎಂವಿವಿ 2017

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು ದಿನಾಂಕ: 30-11-2018

## ತಿದ್ದುಪಡಿ ಅಧಿಸೂಚನೆ

ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಲಾದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2014 ಜಾರಿಗೆ ಬರುವ ದಿನಾಂಕವನ್ನು ಅಧಿಸೂಚಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 77 ಎಂವಿವಿ 2013, ದಿನಾಂಕ: 22-06-2016ರಲ್ಲಿ ಕಂಡು ಬರುವ '24ನೇ ಮಾರ್ಚ್ 2015ರಿಂದ' ಎಂಬ ಪದಗಳನ್ನು "22ನೇ ಜೂನ್ 2016ರಿಂದ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

30/11/18

(ಎಂ.ಎ. ಅಹಮದ್ ಖಾನ್)
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು-2)

30/11/18

ಇವರಿಗೆ
ಸಂಕಲನಕಾರರು ಕರ್ನಾಟಕ ರಾಜ್ಯಪತ್ರ ಬೆಂಗಳೂರು – ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 100 ಪ್ರತಿಗಳನ್ನು ಒದಗಿಸಲು ಕೋರಿದೆ.

ಪ್ರತಿ:-

1) ಮಾನ್ಯ ರಾಜ್ಯಪಾಲರು ಹಾಗೂ ವಿಶ್ವವಿದ್ಯಾಲಯಗಳ ಕುಲಾಧಿಪತಿಗಳ ಆಪ್ತ ಕಾರ್ಯದರ್ಶಿಗಳು, ರಾಜ ಭವನ ಬೆಂಗಳೂರು.
2) ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು ವಿಧಾನಸೌಧ ಬೆಂಗಳೂರು.
3) ಮಾನ್ಯ ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
4) ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಕುಲಪತಿಗಳು/ಕುಲಸಚಿವರು.
5) ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ,
6) ಶಾಖಾ ರಕ್ಷಾ ಕಡತ.

D/March 2018/KSWU

ಅಧಿಕಾರಿಯನ್ನಾಗಿ ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿಯ ನಿರ್ಣಯದಿಂದ ಬಾಧಿತರಾದಂತಹ ಯಾವುದೇ ವ್ಯಕ್ತಿಯು ಮೇಲ್ಮನವಿ ಸಲ್ಲಿಸಲು ಆಯಾ ನಗರ ಯೋಜನಾ ಪ್ರಾಧಿಕಾರದ ವ್ಯಾಪ್ತಿಯ ಉಪ ವಿಭಾಗಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

PR – 813
SC – 25

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ನಾಗರಾಜ
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 32 ಬೆಂಡೂಪ್ರಾ 2017, ಬೆಂಗಳೂರು, ದಿನಾಂಕ: 10.02.2017.**

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ 3(3)(ಎ) ಮತ್ತು (4)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅತಾಉಲ್ಲಾ ಖಾನ್ ಬಿನ್ ಶ್ರೀ ಅಬ್ದುಲ್ ರಹೀಮ್ ಖಾನ್, ಹವೇಲಿ ಮೊಹಲ್ಲಾ, ಕೋಲಾರ ತಾಲ್ಲೂಕು ಮತ್ತು ಜಿಲ್ಲೆ ಇವರನ್ನು ಕೋಲಾರ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಲಾಗಿದೆ.

PR – 816
SC – 25

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ನಾಗರಾಜ
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 77 ಎಂಎವಿ 2013, ಬೆಂಗಳೂರು, ದಿನಾಂಕ: 22.06.2016.**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014 ಪ್ರಕರಣ 1(2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸುವ ಸಂಬಂಧದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014ನ್ನು ಮಾನ್ಯ ರಾಜ್ಯಪಾಲರು ಅನುಮೋದಿಸಿದ ದಿನಾಂಕದಿಂದ ಅಂದರೆ 24ನೇ ಮಾರ್ಚ್ 2015ರಿಂದ ಜಾರಿಗೆ ಬರತಕ್ಕದ್ದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

PR – 823
SC – 100

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಕೆ.ಎಲ್.ಸುಬ್ರಮಣ್ಯ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು-2).

## ಕಂದಾಯ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಆರ್‌ಡಿ 03 ಎಲ್‌ಜಿಪಿ 2017, ಬೆಂಗಳೂರು, ದಿನಾಂಕ: 10.03.2017.**

ನಾಗಮಂಗಲ ವಿಧಾನಸಭಾ ಕ್ಷೇತ್ರದ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 10 ಎಲ್‌ಜಿಪಿ 2014, ದಿನಾಂಕ: 13.02.2014ರಲ್ಲಿ ರಚಿಸಿದ್ದು, ಸದರಿ ಅಧಿಸೂಚನೆಯ ಕ್ರಮ ಸಂಖ್ಯೆ: 2 ರಲ್ಲಿರುವ ಶ್ರೀ ಎಸ್.ಕೆ.ನಾಗೇಶ ಬಿನ್ ಕೆಂಪಯ್ಯ, ಟಿ.ಬಿ.ಬಡಾವಣೆ, ನಾಗಮಂಗಲ (ಸದಸ್ಯರು ಸಾಮಾನ್ಯ) ಇವರ ನಾಮನಿರ್ದೇಶನವನ್ನು ಹಿಂಪಡೆದು ಅವರ ಸ್ಥಳದಲ್ಲಿ ಶ್ರೀ ಎನ್.ಎಂ.ರಾಮಸ್ವಾಮಿಗೌಡ ಬಿನ್ ಶ್ರೀ ಮೇಲಗಿರಿಗೌಡ ಎ.ನಾಗತಿಹಳ್ಳಿ, ಅಳೀಸಂದ್ರ ಅಂಚೆ, ನಾಗಮಂಗಲ ತಾಲ್ಲೂಕ್ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

PR – 827
SC – 35

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಉದಯ್ ಆರ್.ನಾಯಕ್
ಶಾಖಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ.-2).

## ಸಹಕಾರ ಸಚಿವಾಲಯ

### ಅಧಿಸೂಚನೆ

ಸಂಖ್ಯೆ: ಸಿಒ 37 ಸಿಎಲ್‌ಎಸ್ 2017, ಬೆಂಗಳೂರು, ದಿನಾಂಕ: 21.03.2017.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 28ಎ ಉಪ ಪ್ರಕರಣ (4ಬಿ)(i)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹೊನ್ನೂರು ಗ್ರಾಮ, ಚಾಮರಾಜನಗರ ಜಿಲ್ಲೆ ಇದರ ಆಡಳಿತ ಮಂಡಳಿಗೆ

ಕ್ರಮಾಂಕ: ಇಡಿ ?? ಯುಡಿಬಿ 201?

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 22-6-2016

ಅಧಿಸೂಚನೆ

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014 ಪ್ರಕರಣ 1(2)ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ವಿಜಯಪುರದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯದ ಕಾರ್ಯವ್ಯಾಪ್ತಿಯನ್ನು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ವಿಸ್ತರಿಸುವ ಸಂಬಂಧದ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2014ನ್ನು ಮಾನ್ಯ ರಾಜ್ಯಪಾಲರು ಅನುಮೋದಿಸಿದ ದಿನಾಂಕದಿಂದ ಅಂದರೆ 24ನೇ ಮಾರ್ಚ್ 2015ರಿಂದ ಜಾರಿಗೆ ಬರತಕ್ಕದ್ದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

22/6/16

(ಕೆ.ಎಲ್.ಸುಬ್ರಮಣ್ಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾನಿಲಯಗಳು-2)

ಇವರಿಗೆ

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಬೆಂಗಳೂರು – ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ ಅದರ 100 ಪ್ರತಿಗಳನ್ನು ಒದಗಿಸಲು ಕೋರಿದೆ.

ಪ್ರತಿ:-

1. ಮಾನ್ಯ ರಾಜ್ಯಪಾಲರು ಹಾಗೂ ವಿಶ್ವವಿದ್ಯಾಲಯಗಳ ಕುಲಾಧಿಪತಿಗಳ ಆಪ್ತ ಕಾರ್ಯದರ್ಶಿಗಳು, ರಾಜ ಭವನ, ಬೆಂಗಳೂರು.
2. ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
3. ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಉನ್ನತ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು.
4. ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಕುಲಪತಿಗಳು/ಕುಲಸಚಿವರು.
5. ಶಾಖಾ ರಕ್ಷಾ ಕಡತ.

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A<br>Part – IV-A | ಬೆಂಗಳೂರು, ಶನಿವಾರ, ಮಾರ್ಚ್ ೨೮, ೨೦೧೫ (ಚೈತ್ರ ೦೭, ಶಕ ವರ್ಷ ೧೯೩೭)<br>Bengaluru, Saturday, March 28, 2015 (Chaithra 07, Shaka Varsha 1937) | ನಂ. ೨೪೪<br>No. 244 |
|---|---|---|


ಸಂಸದೀಯ ವ್ಯವಹಾರಗಳ ಸಚಿವಾಲಯ

ಅಧಿಸೂಚನೆ

ಸಂಖ್ಯೆ: ಸಂವ್ಯಶಾಇ 26 ಶಾಸನ 2014, ಬೆಂಗಳೂರು, ದಿನಾಂಕ: 28.03.2015

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2014– ಇದಕ್ಕೆ 2015ರ ಮಾರ್ಚ್ ತಿಂಗಳ ಇಪ್ಪತ್ನಾಲ್ಕನೇ ದಿನಾಂಕದಂದು ಘನತೆವೆತ್ತ ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ:11 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

## 2015 ರ ಕರ್ನಾಟಕ ಅಧಿನಿಯಮ ಸಂಖ್ಯೆ: 11

(2015 ರ ಮಾರ್ಚ್ ಇಪ್ಪತ್ತೆಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

## ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014

(2015 ರ ಮಾರ್ಚ್ ಇಪ್ಪತ್ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು (2001ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೈದನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

1\. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–(1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2\. 3ನೇ ಪ್ರಕರಣದ ತಿದ್ದುಪಡಿ.– ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರ (2001ರ ಕರ್ನಾಟಕ ಅಧಿನಿಯಮ 29) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (1ಎ) ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1ಎ) ಮಹಿಳೆಯರು ಕಲಿಕೆಯನ್ನು ಮುಂದುವರಿಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆಯಲ್ಲಿ ಪ್ರಗತಿಯನ್ನು ಸಾಧಿಸುವುದಕ್ಕಾಗಿ, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನ ವಿಜ್ಞಾನ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, [illegible] ಮೈಸೂರು [illegible] ಮತ್ತು [illegible] ಸಂಶೋಧನೆಯನ್ನು ಮೇಲ್ದರ್ಜೆ ಮಾಡುವುದನ್ನು ಒಳಗೊಂಡಂತೆ [illegible] ಅಧಿಕಾರವ್ಯಾಪ್ತಿಯನ್ನು ಹೊಂದಿರುವ [illegible] ವಿಭಾಗದಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಒಂದು ಮಹಿಳಾ ವಿಶ್ವವಿದ್ಯಾನಿಲಯವನ್ನು ರಾಜ್ಯದಲ್ಲಿ ಸ್ಥಾಪಿಸತಕ್ಕದ್ದು.

ವ್ಯಾಸಂಗ ಮಾಡುತ್ತಿರುವ ಯಾವುದೇ ವಿದ್ಯಾರ್ಥಿನಿಯು, ಮಹಿಳಾ ವಿಶ್ವವಿದ್ಯಾನಿಲಯವು ಅಂಥ ಪರೀಕ್ಷೆಯನ್ನು ವ್ಯವಸ್ಥೆಗೊಳಿಸುವವರೆಗೆ, ಅಂಥ ಸಂಬಂಧಪಟ್ಟ ವಿಶ್ವವಿದ್ಯಾನಿಲಯಗಳ ಪರೀಕ್ಷೆಗೆ ಪ್ರವೇಶ ನೀಡತಕ್ಕದ್ದು ಮತ್ತು ಅಂಥ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೆ ಅವಳು ಅರ್ಹಳಾಗುವ ಪದವಿ ಅಥವಾ ಡಿಪ್ಲೋಮಾವನ್ನು ಅವಳಿಗೆ ಪ್ರದಾನ ಮಾಡತಕ್ಕದ್ದು.

(ಬಿ) ಮೂಲ ಅಧಿನಿಯಮದಡಿ ಸ್ಥಾಪಿತವಾದ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ, ಯಾವುದೇ ವಿಶ್ವವಿದ್ಯಾನಿಲಯವು ಯಾವುದೇ ಪರೀಕ್ಷೆಯನ್ನು ನಡೆಸಿ ಅದರ ಫಲಿತಾಂಶವನ್ನು ಪ್ರಕಟಿಸಿದ್ದು ಆದರೆ, ಅದಕ್ಕೆ ಸಂಬಂಧಪಟ್ಟ ಪದವಿ ಅಥವಾ ಡಿಪ್ಲೋಮಾವನ್ನು ಪ್ರದಾನ ಮಾಡಿರದಿದ್ದರೆ ಅಥವಾ ನೀಡಿರದಿದ್ದರೆ ಅಥವಾ ಯಾವುದೇ ಅಂಥ ಪರೀಕ್ಷೆಯ ಫಲಿತಾಂಶವನ್ನು ಸದರಿ ವಿಶ್ವವಿದ್ಯಾನಿಲಯಗಳು ಪ್ರಕಟಿಸಿರದಿದ್ದರೆ, ಆಗ ಅಂಥ ಪರೀಕ್ಷೆಯನ್ನು ಸಂದರ್ಭಾನುಸಾರವಾಗಿ ಸಂಬಂಧಿಸಿದ ವಿಶ್ವವಿದ್ಯಾನಿಲಯವೇ ನಡೆಸಿದೆ ಎಂದು ಭಾವಿಸತಕ್ಕದ್ದು.

೫. ತೊಂದರೆಗಳ ನಿವಾರಣೆ.- ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅವಶ್ಯವೆಂದು ಅಥವಾ ಯುಕ್ತವೆಂದು ತನಗೆ ಕಂಡುಬರಬಹುದಾದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವ ಆದೇಶವನ್ನೂ ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಎಸ್.ಬಿ. ಗುಂಜಿಗಾವಿ
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

---

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ... (ಎಸ್) 200 ಪ್ರತಿಗಳು

ಕರ್ನಾಟಕ ಸರ್ಕಾರ

ಸಂ: ಕಾಇ 15 ಕಾಬಾನಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 10/03/2020

07
12/3/20

ಇವರಿಂದ:

ಸರ್ಕಾರದ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ, ವಿಕಾಸ ಸೌಧ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:1643ಕ್ಕೆ ಉತ್ತರಿಸುವ ಬಗ್ಗೆ

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1643ಕ್ಕೆ ಉತ್ತರಗಳ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

ಕೆ.ಶಿವಲಿಂಗಯ್ಯ
(ಕೆ.ಶಿವಲಿಂಗಯ್ಯ) 10/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
(ಕಾರ್ಖಾನೆ ಮತ್ತು ಬಾಯ್ಲರ್)

**ಪ್ರತಿಗಳು:**

1) ಮಾನ್ಯ ಕಾರ್ಮಿಕ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ,
2) ಮಾನ್ಯ ಸರ್ಕಾರದ ಕಾರ್ಯದರ್ಶಿಯವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ.
3) ಸರ್ಕಾರದ ಉಪ ಕಾರ್ಯದರ್ಶಿ-2 ರವರ ಆಪ್ತ ಶಾಖೆ, ಕಾರ್ಮಿಕ ಇಲಾಖೆ, ವಿಕಾಸ ಸೌಧ,
4) ಸರ್ಕಾರದ ಅಧೀನ ಕಾರ್ಯದರ್ಶಿ, ಸ್ವೀಮರ, ರವಾನೆ ಮತ್ತು ಸಮನ್ವಯ ಶಾಖೆ, ಕಾರ್ಮಿಕ ಇಲಾಖೆ,
5) ಹೆಚ್ಚುವರಿ ಪತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1643
2. ಮಾನ್ಯ ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ)
3. ಉತ್ತರಿಸಬೇಕಾದ ದಿನಾಂಕ : 12/3/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಪ್ರ. ಸಂ. | ಪ್ರಶ್ನೆ | ಇಲಾಖಾ ಮಾಹಿತಿ |
|---|---|---|
| ಅ | ಬೆಳಗಾವಿ ಉದ್ಯಮಬಾಗ ಪ್ರದೇಶದಲ್ಲಿರುವ ಶರ್ಮಾ ಸ್ಟೀಲ್ ಕಾಸ್ಟ್, ನಂ.6, ಶರ್ಮಾ ಗ್ರೂಪ್ ಆಫ್ ಕಂಪನೀಸ್, ಪ್ಲಾಟ್ ನಂ.83 ಮತ್ತು ಅನಗೋಳ ಕೈಗಾರಿಕಾ ಪ್ರದೇಶದಲ್ಲಿರುವ ಸ್ಟ್ಯಾಂಡರ್ಡ್ ಕ್ಲೋರೈಡ್ ಲಿ, 99, ಕಾರ್ಖಾನೆಗಳಲ್ಲಿ ಸರ್ಕಾರದ ವಿವಿಧ ನಿಯಮಗಳ ಉಲ್ಲಂಘನೆಯಾಗಿದ್ದಲ್ಲಿ ವಿವರ ನೀಡುವುದು; | ಬೆಳಗಾವಿ ಉದ್ಯಮಬಾಗ ಪ್ರದೇಶದಲ್ಲಿರುವ ಶರ್ಮಾ ಸ್ಟೀಲ್ ಕಾಸ್ಟ್, ನಂ.6, ಶರ್ಮಾ ಗ್ರೂಪ್ ಆಫ್ ಕಂಪನೀಸ್, ಪ್ಲಾಟ್ ನಂ.83 ಮತ್ತು ಅನಗೋಳ ಕೈಗಾರಿಕಾ ಪ್ರದೇಶದಲ್ಲಿರುವ ಸ್ಟ್ಯಾಂಡರ್ಡ್ ಕ್ಲೋರೈಡ್ ಲಿ, 99, ಕಾರ್ಖಾನೆಗಳಲ್ಲಿ ಸರ್ಕಾರದ ನಿಯಮಗಳ ಉಲ್ಲಂಘನೆಯಾಗಿರುವ ಬಗ್ಗೆ ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ. |
| ಆ | ಹಾಗಿದ್ದಲ್ಲಿ, ಸಂಬಂಧಪಟ್ಟವರಿಗೆ ನೋಟೀಸುಗಳನ್ನು ಜಾರಿ ಮಾಡಲಾಗಿದೆಯೇ; (ವಿವರ ನೀಡುವುದು) | ಸಂಬಂಧಪಟ್ಟವರಿಗೆ ನೋಟೀಸುಗಳನ್ನು ಜಾರಿ ಮಾಡಿರುವ ಬಗೆಗಿನ ವಿವರಗಳನ್ನು ಅನುಬಂಧ– 2 ರಲ್ಲಿ ಒದಗಿಸಲಾಗಿದೆ |
| ಇ | ಸಾರ್ವಜನಿಕ ಹಾಗೂ ಸರ್ಕಾರದ ಹಿತದೃಷ್ಟಿಯಿಂದ ಇಲಾಖೆಯವರು ನೀಡಿರುವ ನೋಟೀಸುಗಳಿಗೆ ಕಾರ್ಖಾನೆಗಳಲ್ಲಿ ಬದಲಾವಣೆ ಕಂಡುಬಂದಿದೆಯೇ; | ಸಾರ್ವಜನಿಕ ಹಾಗೂ ಸರ್ಕಾರದ ಹಿತದೃಷ್ಟಿಯಿಂದ ಇಲಾಖೆಯವರು ನೀಡಿರುವ ನೋಟೀಸುಗಳಿಗೆ ಕಾರ್ಖಾನೆಗಳಲ್ಲಿ ಕಂಡು ಬಂದಿರುವ ಬದಲಾವಣೆಯ ವಿವರಗಳನ್ನು ಅನುಬಂಧ– 3 ರಲ್ಲಿ ಒದಗಿಸಲಾಗಿದೆ |
| ಈ | ಬದಲಾವಣೆಯಾಗದಿದ್ದಲ್ಲಿ, ತಪ್ಪಿತಸ್ಥರ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು? | ಬದಲಾವಣೆಯಾಗದಿದ್ದಲ್ಲಿ, ತಪ್ಪಿತಸ್ಥರ ಮೇಲೆ ಕೈಗೊಂಡಿರುವ ಕ್ರಮದ ವಿವರಗಳನ್ನು ಅನುಬಂಧ– 4 ರಲ್ಲಿ ಒದಗಿಸಲಾಗಿದೆ |

ಸಂಖ್ಯೆ: ಕಾಇ 15 ಕಾಬಾನಿ 2020

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಹಾಗೂ ಸಕ್ಕರೆ ಸಚಿವರು

**ಪ್ರಶ್ನೆ ಸಂ.1643 ಕ್ಕೆ ಉತ್ತರಿಸಲು ಇಲಾಖಾ ಮಾಹಿತಿಯನ್ನು ಒದಗಿಸುವ ಬಗ್ಗೆ.**

**ಅನುಬಂಧ–1**

| ಸದರಿ ಮೂರು ಕಾರ್ಖಾನೆಗಳಲ್ಲಿ ವಿವಿಧ ನಿಯಮಗಳ ಉಲ್ಲಂಘನೆಯ ವಿವರ | | |
|---|---|---|
| ಮೆ: ಶರ್ಮಾ ಸ್ಟೀಲ್ ಕ್ಯಾಸ್ಟ್, ನಂ. ಎಂ–6, ಉದ್ಯಮ್‌ಬಾಗ್, ಬೆಳಗಾವಿ. (ಎಂವೈಬಿಜಿಎಂ–2590) | ಮೆ: ಶರ್ಮಾ ಮೆಷಿನ್ ಟೂಲ್ಸ್, ನಂ. ಡಿ–83, ಉದ್ಯಮ್‌ಬಾಗ್, ಬೆಳಗಾವಿ. (ಎಂವೈಬಿಜಿಎಂ–2782) | ಮೆ: ಸ್ಟ್ಯಾಂಡರ್ಡ ಕ್ಲೋರೈಡ್ ಲಿಮಿಟೆಡ್, 99 ಅನಗೋಳ ಕೈಗಾರಿಕಾ ಪ್ರದೇಶ, ಬೆಳಗಾವಿ |
| **ಕಾರ್ಖಾನೆಗಳ ಕಾಯ್ದೆ 1948ರ**<br>ಕಲಂ 45, 59.<br>**ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು 1969ರ**<br>ನಿಯಮ 71(10)(ಎ),<br>ನಿಯಮ 111,<br>ನಿಯಮ 129ರ ಷೆಡ್ಯೂಲ್ XIII ರ ಕ್ಲಾಸ್ 3, 4, 7(2), 7(3)<br>ನಿಯಮ 129ರ ಷೆಡ್ಯೂಲ್ XXVI ರ ಕ್ಲಾಸ್ 12. | **ಕಾರ್ಖಾನೆಗಳ ಕಾಯ್ದೆ 1948ರ**<br>ಕಲಂ 45, 59.<br>**ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು 1969ರ**<br>ನಿಯಮ 86 (2),<br>ನಿಯಮ 71 (10) (ಎ) | **ಕಾರ್ಖಾನೆಗಳ ಕಾಯ್ದೆ 1948ರ**<br>ಕಲಂ 45(3),<br>**ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು 1969ರ**<br>ನಿಯಮ 112<br>ನಿಯಮ 119<br>ನಿಯಮ 137<br>ನಿಯಮ 138<br>ನಿಯಮ 139<br>ಕ್ಲಾಸ್ 2 ಆಫ್ ಷೆಡ್ಯೂಲ್ V under Rule 57<br>ನಿಯಮ 8(1) |

**ಪ್ರಶ್ನೆ ಸಂ.1643 ಕ್ಕೆ ಉತ್ತರಿಸಲು ಇಲಾಖಾ ಮಾಹಿತಿಯನ್ನು ಒದಗಿಸುವ ಬಗ್ಗೆ.**

## ಅನುಬಂಧ – 2

| ಸದರಿ ಕಾರ್ಖಾನೆಗಳಿಗೆ ಭೇಟಿ ನೀಡಿ ನೋಟೀಸ್‌ಗಳನ್ನು ಜಾರಿ ಮಾಡಿರುವ ವಿವರ | | |
|---|---|---|
| ಮೆ: ಶರ್ಮಾ ಸ್ಟೀಲ್ ಕ್ಯಾಸ್ಟ್, ನಂ. ಎಂ–6, ಉದ್ಯಮ್‌ಬಾಗ್, ಬೆಳಗಾವಿ. (ಎಂಪೈಬಿಜಿಎಂ–2590) | ಮೆ: ಶರ್ಮಾ ಮೆಷಿನ್ ಟೂಲ್ಸ್, ನಂ. ಡಿ–83, ಉದ್ಯಮ್‌ಬಾಗ್, ಬೆಳಗಾವಿ. (ಎಂಪೈಬಿಜಿಎಂ–2782) | ಮೆ: ಸ್ಟ್ಯಾಂಡರ್ಡ ಕ್ಲೋರೈಡ್ ಲಿಮಿಟೆಡ್, 99 ಅನಗೋಳ ಕೈಗಾರಿಕಾ ಪ್ರದೇಶ, ಬೆಳಗಾವಿ |
| ದಿನಾಂಕ: 24.12.2018 ರಂದು ಸದರಿ ಕಾರ್ಖಾನೆಗೆ ಭೇಟಿ ನೀಡಿ ಪರಿವೀಕ್ಷಣೆ ಮಾಡಿ ಗಮನಿಸಿದ ಅಂಶಗಳಿಗೆ ಪರಿವೀಕ್ಷಣಾ ವರದಿ ನೀಡಲಾಯಿತು. ನಂತರ ಆಡಳಿತ ವರ್ಗದವರು ಪೂರ್ಣ ಪ್ರಮಾಣದಲ್ಲಿ ಪರಿವೀಕ್ಷಣೆಯಲ್ಲಿನ ಅಂಶಗಳನ್ನು ಅನುಷ್ಠಾನಗೊಳಿಸದೇ ಇದ್ದುದರಿಂದ ಕಾಯ್ದೆ/ನಿಯಮಗಳ ಉಲ್ಲಂಘನೆಗಳಿಗೆ ದಿನಾಂಕ: 04.02.2019 ರಂದು ನೋಟಿಸನ್ನು ಜಾರಿ ಮಾಡಲಾಗಿರುತ್ತದೆ. | ದಿನಾಂಕ: 24.12.2018 ರಂದು ಸದರಿ ಕಾರ್ಖಾನೆಗೆ ಭೇಟಿ ನೀಡಿ ಪರಿವೀಕ್ಷಣೆ ಮಾಡಿ ಗಮನಿಸಿದ ಅಂಶಗಳಿಗೆ ಪರಿವೀಕ್ಷಣಾ ವರದಿ ನೀಡಲಾಯಿತು. ನಂತರ ಆಡಳಿತ ವರ್ಗದವರು ಪೂರ್ಣ ಪ್ರಮಾಣದಲ್ಲಿ ಪರಿವೀಕ್ಷಣೆಯಲ್ಲಿನ ಅಂಶಗಳನ್ನು ಅನುಷ್ಠಾನಗೊಳಿಸದೇ ಇದ್ದುದರಿಂದ ಕಾಯ್ದೆ/ನಿಯಮಗಳ ಉಲ್ಲಂಘನೆಗಳಿಗೆ ದಿನಾಂಕ: 04.02.2019 ರಂದು ನೋಟಿಸನ್ನು ಜಾರಿ ಮಾಡಲಾಗಿರುತ್ತದೆ. | ಸದರಿ ಕಾರ್ಖಾನೆಗೆ ದಿನಾಂಕ:09–01–2019 ಹಾಗೂ 07–02–2019 ರಂದು ಭೇಟಿ ನೀಡಿ ಪರಿವೀಕ್ಷಣೆ ಮಾಡಿ ಗಮನಿಸಿದ ಅಂಶಗಳಿಗೆ ಪರಿವೀಕ್ಷಣಾ ವರದಿ ನೀಡಲಾಯಿತು. ನಂತರ ಆಡಳಿತ ವರ್ಗದವರು ಪೂರ್ಣ ಪ್ರಮಾಣದಲ್ಲಿ ಪರಿವೀಕ್ಷಣೆಯಲ್ಲಿನ ಅಂಶಗಳನ್ನು ಅನುಷ್ಠಾನಗೊಳಿಸದೇ ಇದ್ದುದರಿಂದ ಕಾಯ್ದೆ/ನಿಯಮಗಳ ಉಲ್ಲಂಘನೆಗಳಿಗೆ ನೋಟಿಸನ್ನು ದಿನಾಂಕ: 08–02–2019 ರಂದು ಜಾರಿ ಮಾಡಲಾಗಿರುತ್ತದೆ. |

**ಪ್ರಶ್ನೆ ಸಂ.1643 ಕ್ಕೆ ಉತ್ತರಿಸಲು ಇಲಾಖಾ ಮಾಹಿತಿಯನ್ನು ಒದಗಿಸುವ ಬಗ್ಗೆ.**

## ಅನುಬಂಧ – 3

| ಸದರಿ ಕಾರ್ಖಾನೆಗಳಿಗೆ ಇಲಾಖಾವತಿಯಿಂದ ನೀಡಿರುವ ನೋಟೀಸ್‌ಗಳಿಗೆ ಕಾರ್ಖಾನೆಗಳಲ್ಲಿ ಕಂಡುಬಂದಿರುವ ಬದಲಾವಣೆಗಳ ವಿವರ | | |
|---|---|---|
| ಮೆ: ಶರ್ಮಾ ಸ್ಟೀಲ್ ಕ್ಯಾಸ್ಟ್, ನಂ. ಎಂ–6, ಉದ್ಯಮ್‌ಬಾಗ್, ಬೆಳಗಾವಿ. (ಎಂವೈಬಿಜಿಎಂ–2590) | ಮೆ: ಶರ್ಮಾ ಮೆಷಿನ್ ಟೂಲ್ಸ್, ನಂ. ಡಿ–83, ಉದ್ಯಮ್‌ಬಾಗ್, ಬೆಳಗಾವಿ. (ಎಂವೈಬಿಜಿಎಂ–2782) | ಮೆ: ಸ್ಟ್ಯಾಂಡರ್ಡ್ ಕ್ಲೋರೈಡ್ ಲಿಮಿಟೆಡ್, 99 ಅನಗೋಳ ಕೈಗಾರಿಕಾ ಪ್ರದೇಶ, ಬೆಳಗಾವಿ |
| ಯಾವುದೇ ಬದಲಾವಣೆ ಕಂಡುಬಂದಿರುವುದಿಲ್ಲ | ಯಾವುದೇ ಬದಲಾವಣೆ ಕಂಡುಬಂದಿರುವುದಿಲ್ಲ | ಸದರಿ ಕಾರ್ಖಾನೆಯ ಆಡಳಿತವರ್ಗದವರು ಕೆಳಕಂಡ ನಿಯಮಗಳ ಉಲ್ಲಂಘನೆಗಳನ್ನು ಸರಿಪಡಿಸಿಕೊಂಡಿರುತ್ತಾರೆ.<br>**ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು 1969ರ**<br>ನಿಯಮ 112, ನಿಯಮ 137 ನಿಯಮ 139<br><br>ಸದರಿ ಕಾರ್ಖಾನೆಯ ಆಡಳಿತವರ್ಗದವರು ಕೆಳಕಂಡ ನಿಯಮಗಳ ಉಲ್ಲಂಘನೆಗಳನ್ನು ಸರಿಪಡಿಸಿಕೊಂಡಿರುವುದಿಲ್ಲ.<br>**ಕಾರ್ಖಾನೆಗಳ ಕಾಯ್ದೆ 1948ರ**<br>ಕಲಂ 45(3).<br>**ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು 1969ರ**<br>ನಿಯಮ 119, ನಿಯಮ 138<br>ಕ್ಲಾಸ್ 2 ಆಫ್ ಷೆಡ್ಯೂಲ್ V under Rule 57<br>ನಿಯಮ 8(1) |

**ಪ್ರಶ್ನೆ ಸಂ.1643 ಕ್ಕೆ ಉತ್ತರಿಸಲು ಇಲಾಖಾ ಮಾಹಿತಿಯನ್ನು ಒದಗಿಸುವ ಬಗ್ಗೆ.**

## ಅನುಬಂಧ – 4

| ತಪ್ಪಿಸ್ಥ ಕಾರ್ಖಾನೆಗಳ ಆಡಳಿತವರ್ಗದವರ ಮೇಲೆ ತೆಗೆದುಕೊಂಡಿರುವ ಕ್ರಮದ ವಿವರ | | |
|---|---|---|
| ಮೆ: ಶರ್ಮಾ ಸ್ಟೀಲ್ ಕ್ಯಾಸ್ಟ್, ನಂ. ಎಂ–6, ಉದ್ಯಮ್‌ಬಾಗ್, ಬೆಳಗಾವಿ. (ಎಂವೈಬಿಜಿಎಂ–2590) | ಮೆ: ಶರ್ಮಾ ಮೆಷಿನ್ ಟೂಲ್ಸ್, ನಂ. ಡಿ–83, ಉದ್ಯಮ್‌ಬಾಗ್, ಬೆಳಗಾವಿ. (ಎಂವೈಬಿಜಿಎಂ–2782) | ಮೆ: ಸ್ಟ್ಯಾಂಡರ್ಡ ಕ್ಲೋರೈಡ್ ಲಿಮಿಟೆಡ್, 99 ಅನಗೋಳ ಕೈಗಾರಿಕಾ ಪ್ರದೇಶ, ಬೆಳಗಾವಿ (ಎಂವೈಬಿಜಿಎಂ–2843) |
| ಪರಿವೀಕ್ಷಣಾ ಸಮಯದಲ್ಲಿ ಕಾರ್ಖಾನೆಗಳ ಕಾಯ್ದೆ/ನಿಯಮಾವಳಿಗಳಡಿ ಕಂಡು ಬಂದ ಉಲ್ಲಂಘನೆಗಳಿಗಾಗಿ ಆಡಳಿತ ವರ್ಗದವರ ವಿರುದ್ಧ ಬೆಳಗಾವಿಯ ಮಾನ್ಯ 4ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಮೊಕದ್ದಮೆಯನ್ನು ಸಿಸಿ ಸಂಖ್ಯೆ: 212/2019 ರಂತೆ ಹೂಡಲಾಗಿದ್ದು ವಿಚಾರಣೆ ಮುಂದುವರೆದಿದೆ. ಹಾಗೂ ಮುಂದಿನ ವಿಚಾರಣಾ ದಿನಾಂಕ: 18.04.2020 ಆಗಿರುತ್ತದೆ. | ಪರಿವೀಕ್ಷಣಾ ಸಮಯದಲ್ಲಿ ಕಾರ್ಖಾನೆಗಳ ಕಾಯ್ದೆ/ನಿಯಮಾವಳಿಗಳಡಿ ಕಂಡು ಬಂದ ಉಲ್ಲಂಘನೆಗಳಿಗಾಗಿ ಆಡಳಿತ ವರ್ಗದವರ ವಿರುದ್ಧ ಬೆಳಗಾವಿಯ ಮಾನ್ಯ 4ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಮೊಕದ್ದಮೆಯನ್ನು ಸಿಸಿ ಸಂಖ್ಯೆ: 211/2019 ರಂತೆ ಹೂಡಲಾಗಿದ್ದು ವಿಚಾರಣೆ ಮುಂದುವರೆದಿದೆ. ಹಾಗೂ ಮುಂದಿನ ವಿಚಾರಣಾ ದಿನಾಂಕ: 18.04.2020 ಆಗಿರುತ್ತದೆ. | ಬೆಳಗಾವಿಯ ಮಾನ್ಯ 4ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ದಿ: 03–04–2019 ರಂದು ಮೊಕದ್ದಮೆಯನ್ನು ಹೂಡಲಾಗಿರುತ್ತದೆ ಹಾಗೂ ಸಿಸಿ ಸಂಖ್ಯೆ: 252/2019 ಆಗಿದ್ದು, ಪ್ರಕರಣವು ವಿಚಾರಣಾ ಹಂತದಲ್ಲಿರುತ್ತದೆ. |

| Sl No. | Name | District | Arts | Science | Commerce |
|---|---|---|---|---|---|
| 379 | Govt. First Grade College, Shiriwara, Manvi Tq. | Raichur | Yes | | Yes |
| 380 | Govt. First Grade College, Beedi, Khanapura Tq. | Belgaum | Yes | | Yes |
| 381 | Govt. First Grade College, Kerur-587 206, Badami Tq. | Bagalkote | Yes | Yes | Yes |
| 382 | Govt. First Grade College, Managuli, Basavana Bagewadi Tq. | Bijapur | Yes | | Yes |
| 383 | Govt. First Grade College, Julaki, Indi Tq. | Bijapur | Yes | | Yes |
| 384 | Govt. First Grade College, Devara Hipparagi, Sindhagi, Tq. | Bijapur | Yes | | Yes |
| 385 | Govt. First Grade College, Rampura-587 207, Bagalkote Tq. | Bagalkote | Yes | | Yes |
| 386 | Govt. First Grade College for Women, Tumkur | Tumkur | Yes | Yes | Yes |
| 387 | Govt. First Grade College for Women, Chitradurga | Chitradurga | Yes | Yes | Yes |
| 388 | Govt. First Grade College for Women, Shimoga | Shimoga | Yes | | Yes |
| 389 | Govt. First Grade College for Women, Bellary | Bellary | Yes | Yes | Yes |
| 390 | Govt. First Grade College for Women, Bidar | Bidar | Yes | Yes | Yes |
| 391 | Govt. First Grade College for Women, Koppal | Koppal | Yes | Yes | Yes |
| 392 | Govt. First Grade College for Women, Raichur | Raichur | Yes | Yes | Yes |
| 393 | Govt. First Grade College for Women, Yadgir-585 202 | Yadgir | Yes | | Yes |
| 394 | Govt. First Grade College for Women, Chamarajanagar | Chamarajanagar | Yes | Yes | Yes |
| 395 | Govt. First Grade College for Women, Madikeri | Madikeri | Yes | | Yes |
| 396 | Govt. First Grade College for Women, Old Court Building, Bagalkote-587 101 | Bagalkote | Yes | Yes | Yes |
| 397 | Govt. First Grade College for Women, Belgaum-590 002 | Belgaum | Yes | | Yes |
| 398 | Govt. First Grade College for Women, Bijapur | Bijapur | Yes | Yes | Yes |
| 399 | Govt. First Grade College for Women, Dharwad | Dharwad | Yes | Yes | Yes |
| 400 | Govt. First Grade College for Women, Gadag | Gadag | Yes | Yes | Yes |
| 401 | Govt. First Grade College for Women, Haveri | Haveri | Yes | | Yes |
| 402 | Govt. First Grade College for Women, Karwar | Uttara Kannada | Yes | Yes | Yes |
| 403 | Govt. First Grade College for Women, Chickmagalur | Chickmagalur | Yes | | Yes |

| Sl No. | Name | District | Arts | Science | Commerce |
|---|---|---|---|---|---|
| 404 | Govt. First Grade College for Women, Pavagada, Tumkur Tq | Tumkur | Yes | | Yes |
| 405 | Govt. First Grade College for Women, Chamarajapet, Bangalore | Bangalore | Yes | | Yes |
| 406 | Govt. First Grade College for Women, Doddapallapur, Bangalore Rural - 560 123 | Bangalore Rural | Yes | | Yes |
| 407 | Govt. First Grade College for Women, Sindhanur, Raichur | Raichur | Yes | | Yes |
| 408 | Govt. First Grade College for Women, Puttur, Dakshina Kannada | Dakshina Kannada | Yes | | Yes |
| 409 | Maharanis Commerce and Management College for Women, JLB Road, Mysore - 570 005. | Mysore | | | Yes |
| 410 | Govt. First Grade College,Kanyana,Bantwala Tq | Dakshina Kannada | Yes | | Yes |
| 411 | Govt. First Grade College, Turuvihal, Sindhanur Tq. | Raichur | Yes | | Yes |
| 412 | Govt. First Grade College for Women,Gandada Koti, Hassan. | Hassan | Yes | Yes | Yes |
| 413 | Govt First Grade Women college Yadahalli .Mudhol Tq Bagalkot District | Bagalkote | Yes | | Yes |
| 414 | Govt. Law College, Chamarajanagara | Chamarajanagar | Yes | | |
| 415 | Residential Govt first grade College Ramanagar | Ramnagar | | | Yes |
| 416 | Residential Govt first grade College Haradanahalli.Hole Narsipur Tq,Hassan District | Hassan | Yes | Yes | Yes |
| 417 | Residential Govt. First Grade College,Mudnal,Yadgir Dt | Yadgir | Yes | Yes | Yes |
| 418 | Residential Govt. First Grade College, Haalahalli, Bidar | Bidar | | | Yes |
| 419 | Residential Govt. First Grade College, gundepalli, sedum kalburagi | Gulbarga | Not yet opened | | |
| 420 | Residential Govt. First Grade College, Adalageri, Mudhebihal Tq, Vijayapura | Bijapur | Not yet opened | | |
| 421 | Residential Govt. First Grade College, Kavithala, Manvi Tq. Raichur | Raichur | Yes | | |
| 422 | Residential Govt. First Grade College, Thalabaala, Yalburga Tq, Koppala | Koppal | Yes | Yes | Yes |
| 423 | Residential Govt. First Grade College, Devagiri, Haveri | Haveri | Yes | | Yes |
| 424 | Residential Govt. First Grade College, Malladihalli, Holalkere Tq, Chitradurga | Chitradurga | Not yet opened | | |
| 425 | Residential Govt. First Grade College, Avani, Mulbaglu Tq., Kolar | Kolar | Yes | | Yes |
| 426 | Residential Govt. First Grade College, Ekappura, Chamarajanagara | Chamarajanagar | Not yet opened | | |

| Sl No. | Name | District | Arts | Science | Commerce |
|---|---|---|---|---|---|
| 427 | Government Chitrakala Shale, Tumkur- 572 102 | Tumkur | Yes | | |
| 428 | Government Chitrakala Shale, Dharwar - 580 008 | Dharwad | Yes | | |
| 429 | Govt Model Degree college, Raichur | Raichur | Not yet opened | | |
| 430 | Govt Model Degree college, Yadgir | Yadgir | Not yet opened | | |

ಕರ್ನಾಟಕ ಸರ್ಕಾರ

ಸಂಖ್ಯೆ: ಐಟಿಬಿಟಿ 11 ಎಲ್‌ಸಿಎಂ 2020

ಕರ್ನಾಟಕ ಸರ್ಕಾರ ಸಚಿವಾಲಯ
ಕೊಠಡಿ ಸಂಖ್ಯೆ: 504, 5ನೇ ಹಂತ,
5ನೇ ಮಹಡಿ, ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 11.03.2020

85
LA
11/03/2020

**ಇಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಗೆ,**

ಕಾರ್ಯದರ್ಶಿಗಳು,
ಕರ್ನಾಟಕ ಸಭೆ,
ವಿಧಾನಸೌಧ.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಖಾದರ್ ಯು.ಟಿ (ಮಂಗಳೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:966ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ದಿನಾಂಕ:03.032.2020ರ ಸಂಖ್ಯೆ: ವಿಸಪ್ರಶಾ/ 15ನೇ ವಿಸ 6ಅ/ಚುಗು-ಚುರ.ಪ್ರಶ್ನೆ/06/2020ರ ಅ.ಸ.ಪತ್ರ.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಖಾದರ್ ಯು.ಟಿ (ಮಂಗಳೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:966ಕ್ಕೆ ಉತ್ತರವನ್ನು ಕನ್ನಡದಲ್ಲಿ ತಯಾರಿಸಿ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ.

ತಮ್ಮ ನಂಬುಗೆಯ

11/3/2020

ಸರ್ಕಾರದ ಅಧೀನ ಕಾರ್ಯದರ್ಶಿ,
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪ್ರತಿ:**

01. ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ.
02. ಸರ್ಕಾರದ ಉಪ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ಶಾಖೆ- ಮಾಹಿತಿಗಾಗಿ.
03. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಸಹಾಯಕಿ, ಮಾತಂ, ಜೈತಂ ಹಾಗೂ ವಿತಂ ಇಲಾಖೆ, ಬಹುಮಹಡಿ ಕಟ್ಟಡ.

* * *

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 966 |
|---|---|
| ಸದಸ್ಯರ ಹೆಸರು | ಶ್ರೀ ಖಾದರ್ ಯು.ಟಿ (ಮಂಗಳೂರು) |
| ಉತ್ತರಿಸುವ ದಿನಾಂಕ | 12-03-2020 |
| ಉತ್ತರಿಸುವ ಸಚಿವರು | ಮಾನ್ಯ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು. |
| **ಪ್ರಶ್ನೆ** | **ಉತ್ತರ** |
| ಮಂಗಳೂರಿನಲ್ಲಿ 150ಕ್ಕೂ ಹೆಚ್ಚು ತಂತ್ರಜ್ಞಾನ ಕಂಪನಿಗಳು ಕಾರ್ಯಾಚರಿಸುತ್ತಿರುವುದರಿಂದ ಐ.ಟಿ ಪಾರ್ಕ್ ನಿರ್ಮಿಸುವ ವಿಚಾರ ಸರ್ಕಾರದ ಮುಂದಿದೆಯೇ? | ಕರ್ನಾಟಕ ಸರ್ಕಾರವು TIER-2 ನಗರಗಳಲ್ಲಿ (ಮಂಗಳೂರು ಮತ್ತು ಮೈಸೂರು) ಐಟಿ ಪಾರ್ಕ್‌ನ್ನು ಸರ್ಕಾರಿ ಸ್ವಾಮ್ಯದ ಕಿಯೋನಿಕ್ಸ್ ಹಾಗೂ ಖಾಸಗಿ ಸಹಭಾಗಿತ್ವದಲ್ಲಿ (PPP model) ಸ್ಥಾಪಿಸುವ ಸಲುವಾಗಿ ದಿನಾಂಕ:25-11-2008ರಂದು ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 38 ಎಂಡಿಎ 2008 ಹೊರಡಿಸಿರುತ್ತದೆ.<br><br>ಅದರಂತೆ ಮಂಗಳೂರಿನಲ್ಲಿ ಕಿಯೋನಿಕ್ಸ್ ಸಂಸ್ಥೆಯ ಒಡತನದಲ್ಲಿರುವ ಸುಮಾರು 3.25 ಎಕರೆ ವಿಸ್ತೀರ್ಣ ಪ್ರದೇಶದಲ್ಲಿ ಸರ್ಕಾರಿ ಆದೇಶದಂತೆ PPP ಮಾದರಿಯಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಸಲುವಾಗಿ 2009 ರಿಂದ 2012ರವರೆಗೆ ಐದು ಬಾರಿ "Expression of Interest" ಕರೆಯಲಾಗಿದ್ದು, ಯಾವುದೇ ಆಸಕ್ತರು ಪ್ರತಿಕ್ರಿಯಿಸದೇ ಇದ್ದುದರಿಂದ ಮತ್ತೊಮ್ಮೆ ದಿನಾಂಕ:28-08-2017ರಂದು "Expression of Interest" ಕರೆಯಲಾಯಿತು. ಆದರೆ ಈ ಬಾರಿಯೂ ಸಹ ಯಾವುದೇ ಆಸಕ್ತರು ಭಾಗವಹಿಸದೇ ಇರುವುದರಿಂದ ಐಟಿ ಪಾರ್ಕ್ ಸ್ಥಾಪನೆ ಸಾಧ್ಯವಾಗಿರುವುದಿಲ್ಲ.<br><br>ಮುಂದುವರೆದು ಮಂಗಳೂರಿನಲ್ಲಿ ಐಟಿ ಪಾರ್ಕ್ ಸ್ಥಾಪನೆಯಾಗದಿದ್ದರೂ ಸಹ ಮಂಗಳೂರಿನ ಪರಿಸರ ವ್ಯವಸ್ಥೆಯು ತಂತ್ರಜ್ಞಾನ ಕಂಪನಿಗಳಿಗೆ ಉತ್ತಮ ವಾಗಿರುವುದರಿಂದ ಇಲ್ಲಿ ಅಧಿಕ ತಂತ್ರಜ್ಞಾನ ಕಂಪನಿಗಳು ಕಾರ್ಯ ನಿರ್ವಹಿಸುತ್ತಿವೆ.<br><br>ಆದ್ದರಿಂದ ಮಂಗಳೂರಿನಲ್ಲಿ ತಂತ್ರಜ್ಞಾನ ಕಂಪನಿಗಳ ಉಪಯೋಗಕ್ಕಾಗಿ ಐಕೆಪಿ ವತಿಯಿಂದ ಕೆ-ಟೆಕ್ ಇನ್ನೋವೇಷನ್ ಹಬ್ ಹಾಗೂ ಸರ್ವಬಳಕೆಯ ಸಲಕರಣೆಗಳ ಸೌಲಭ್ಯ {Common Instrumentation Facility(CIF)}ವನ್ನು ಸರ್ಕಾರದ ವತಿಯಿಂದ ಸ್ಥಾಪಿಸಲಾಗಿದೆ.<br><br>ಇದಲ್ಲದೇ, ದಕ್ಷಿಣ ಕನ್ನಡ ಜಿಲ್ಲೆಯ ವಿದ್ಯಾರ್ಥಿಗಳಿಗೆ ತಮ್ಮ ನಾವೀನ್ಯತೆ ಹಾಗೂ ಆವಿಷ್ಕಾರಗಳನ್ನು ಅಭಿವೃದ್ಧಿಪಡಿಸಲು ಈ ಕೆಳಕಂಡ ಕಾಲೇಜುಗಳಲ್ಲಿ |

| | ಸರ್ಕಾರದ ಅನುದಾನದೊಂದಿಗೆ ನ್ಯೂ ಏಜ್ ಇನ್ನೋವೇಷನ್ ಕೇಂದ್ರಗಳನ್ನು ಸ್ಥಾಪಿಸಲಾಗಿರುತ್ತದೆ:-<br>1) ಸಹ್ಯಾದ್ರಿ ಕಾಲೇಜ್ ಆಫ್ ಇಂಜಿನಿಯರಿಂಗ್ ಅಂಡ್ ಮ್ಯಾನೇಜ್‌ಮೆಂಟ್<br>2) ಮಂಗಳೂರು ಇನ್ಸಿಟಿಟ್ಯೂಟ್ ಆಫ್ ಟೆಕ್ನಾಲಜಿ ಅಂಡ್ ಮ್ಯಾನೇಜ್ ಮೆಂಟ್, ಮೂಡಬಿದಿರೆ<br>3) ಪಿಎ ಕಾಲೇಜ್ ಆಫ್ ಇಂಜಿನಿಯರಿಂಗ್.<br>4) ಸೆಂಟ್ ಜೋಸೆಫ್ ಇಂಜಿನಿಯರಿಂಗ್ ಕಾಲೇಜ್.<br>5) ವಿವೇಕಾನಂದ ಕಾಲೇಜ್ ಆಫ್ ಇಂಜಿನಿಯರಿಂಗ್ ಅಂಡ್ ಟೆಕ್ನಾಲಜಿ.<br>ಈ ಇನ್ನೋವೇಷನ್ ಕೇಂದ್ರಗಳು ಇನ್ಕ್ಯೂಬೇಷನ್ ಹಾಗೂ ಪ್ರೋಟೋ ಟೈಪಿಂಗ್ ಸೌಲಭ್ಯಗಳನ್ನು ಮತ್ತು ನವೋದ್ಯಮಗಳನ್ನು ಅಭಿವೃದ್ಧಿಪಡಿಸಲು ಬೇಕಾಗಿರುವ ಮಾರ್ಗದರ್ಶನ ಹಾಗೂ ಬೆಂಬಲವನ್ನು ಒದಗಿಸುತ್ತದೆ.<br>ಈ ರೀತಿಯಾಗಿ ಮಂಗಳೂರಿನಲ್ಲಿ ತಂತ್ರಜ್ಞಾನ ಕಂಪನಿಗಳಿಗೆ ಉತ್ತೇಜನ ನೀಡಲು ಹಲವಾರು ಮೂಲಸೌಕರ್ಯಗಳನ್ನು ಒದಗಿಸಲಾಗಿದೆ. |
|---|---|

(ಐಟಿಬಿಟಿ 11 ಎಲ್‌ಸಿಎಂ 2020)

**(ಡಾ|| ಅಶ್ವಥ್ ನಾರಾಯಣ ಸಿ. ಎನ್.)**
ಉಪ ಮುಖ್ಯಮಂತ್ರಿಗಳು ಹಾಗೂ
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ
ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು
ತಂತ್ರಜ್ಞಾನ ಸಚಿವರು.

ಕರ್ನಾಟಕ ಸರ್ಕಾರ

**ಸಂಖ್ಯೆ:** ಕೌಉಜೀಇ 6 ಉಜೀಪ್ರ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, ಬೆಂಗಳೂರು.
ದಿನಾಂಕ: 11.03.2020

ಇಂದ,
ಸರ್ಕಾರದ ಕಾರ್ಯದರ್ಶಿಗಳು,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ
ಬೆಂಗಳೂರು.

264
415
12/3/20

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ.
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಉಮನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1610 ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.1610/2020 ದಿನಾಂಕ: 02-03-2020.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದ ಕಡೆ ತಮ್ಮ ಗಮನ ಸೆಳೆಯುತ್ತಾ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಉಮನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1610 ಕ್ಕೆ ಉತ್ತರಗಳ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

**ನಿಮ್ಮ ನಂಬುಗೆಯ,**

Srirangama 11/3/2020
(ಶ್ರೀರಂಗಮ್ಮ)
**ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರ)**
**ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ.**

11/3/20

ಕರ್ನಾಟಕ ವಿಧಾನ ಸಭೆ

| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1610 |
|---|---|---|
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ್ ಎ. ಕೋಟ್ಯಾನ್ (ಮೂಡಬಿದ್ರೆ) |
| 3) | ಉತ್ತರಿಸಬೇಕಾದ ದಿನಾಂಕ | 12-03-2020 |
| 4) | ಉತ್ತರಿಸುವವರು | ಮಾನ್ಯ ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ, ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಪ್ರಶ್ನೆ | ಉತ್ತರ |
|---|---|
| (ಅ) ಮುಖ್ಯಮಂತ್ರಿ ಕರ್ನಾಟಕ ಮತ್ತು ಪ್ರಧಾನಮಂತ್ರಿ ಕೌಶಲ್ಯ ವಿಕಾಸ್ ಯೋಜನೆಯ ಅನುಷ್ಠಾನದಲ್ಲಿನ ಪ್ರಗತಿಯ ಕುರಿತಾದ ವಿವರಗಳು ಯಾವುವು; | ಪ್ರಸ್ತುತ ಸಾಲಿನಲ್ಲಿ ಮುಖ್ಯಮಂತ್ರಿ ಕೌಶಲ್ಯ ಕರ್ನಾಟಕ ಯೋಜನೆಗೆ ರೂ.83.53 ಕೋಟಿಗಳ ಅನುದಾನದಲ್ಲಿ ರೂ.75.64 ಕೋಟಿಗಳ ವೆಚ್ಚವನ್ನು ಭರಿಸಲಾಗಿದೆ ಇದರಿಂದ 32289 ಫಲಾನುಭವಿಗಳಿಗೆ ತರಬೇತಿ ನೀಡಲಾಗಿದ್ದು 14832 ಫಲಾನುಭವಿಗಳಿಗೆ ತರಬೇತಿಯು ಪ್ರಗತಿಯಲ್ಲಿದೆ. ಮುಂದುವರೆದು ಪಿ.ಎಂ.ಕೆ.ವಿ.ವೈ. ರೂ.10.00 ಕೋಟಿಗಳ ಅನುದಾನದಲ್ಲಿ ರೂ.5.00 ಕೋಟಿ ವೆಚ್ಚವನ್ನು ಭರಿಸಲಾಗಿದೆ ಇದರಿಂದ 6280 ಫಲಾನುಭವಿಗಳಿಗೆ ತರಬೇತಿ ನೀಡಲಾಗಿದ್ದು 6572 ಫಲಾನುಭವಿಗಳಿಗೆ ತರಬೇತಿಯು ಪ್ರಗತಿಯಲ್ಲಿದೆ. |
| (ಆ) ಸದರಿ ಯೋಜನೆಯ ಮೂಲಕ ರಾಜ್ಯಾದ್ಯಂತ ಎಷ್ಟು ಜನ ಫಲಾನುಭವಿಗಳಿಗೆ ಯೋಜನಾ ಸೌಲಭ್ಯವನ್ನು ನೀಡಲಾಗಿದೆ (ಜಿಲ್ಲಾವಾರು, ಸಂಖ್ಯಾವಾರು ಸಂಪೂರ್ಣ ವಿವರ ನೀಡುವುದು); | ಪ್ರಸ್ತುತ ಸಾಲಿನಲ್ಲಿ ಮುಖ್ಯಮಂತ್ರಿ ಕೌಶಲ್ಯ ಕರ್ನಾಟಕ ಯೋಜನೆಯಡಿ 32289 ಫಲಾನುಭವಿಗಳಿಗೆ ತರಬೇತಿ ನೀಡಲಾಗಿದ್ದು 14832 ಫಲಾನುಭವಿಗಳಿಗೆ ತರಬೇತಿಯು ಪ್ರಗತಿಯಲ್ಲಿದೆ. ಮುಂದುವರೆದು ಪಿ.ಎಂ.ಕೆ.ವಿ.ವೈ. 6280 ಫಲಾನುಭವಿಗಳಿಗೆ ತರಬೇತಿ ನೀಡಲಾಗಿದ್ದು 6572 ಫಲಾನುಭವಿಗಳಿಗೆ ತರಬೇತಿಯು ಪ್ರಗತಿಯಲ್ಲಿದೆ. ಪ್ರಗತಿಯ ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |
| (ಇ) ಇಂಥ ಉಪಯುಕ್ತ ಯೋಜನಾನುಷ್ಠಾನದ ಮೂಲಕ ಉದ್ಯೋಗ ಸೃಷ್ಟಿಸುವ ಹಾಗೂ ವೃತ್ತಿ ಕೌಶಲ್ಯವನ್ನು ಹೆಚ್ಚಿಸುವ ಕುರಿತು ರೂಪಿಸಿರುವ ಕ್ರಿಯಾ ಯೋಜನೆಗಳಾವುವು? | ಸದರಿ ಯೋಜನೆ ಅನುಷ್ಠಾನಗೊಳಿಸಲು www.kaushalkar.com ಎಂಬ ಜಾಲತಾಣವನ್ನು ರೂಪಿಸಲಾಗಿದ್ದು ಇದರನ್ವಯ ಉದ್ಯೋಗಾಕಾಂಕ್ಷಿಗಳು ಕೌಶಲ್ಯ ತರಬೇತಿ, ಶಿಶಿಕ್ಷು ಕಾರ್ಯಕ್ರಮದಲ್ಲಿ ತರಬೇತಿ ಬಯಸುವವರು ಹಾಗೂ ನೇರವಾಗಿ ಉದ್ಯೋಗ ಪಡೆಯಲು ನೋಂದಾಯಿಸಿಕೊಳ್ಳಲು ಅನುಕೂಲ ಮಾಡಿಕೊಡಲಾಗಿದೆ. ಮುಖ್ಯಮಂತ್ರಿ ಕೌಶಲ್ಯ ಕರ್ನಾಟಕ ಯೋಜನೆಯಡಿ 2019-20ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ 56000 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಗುರಿ ಹೊಂದಿದ್ದು, ಪಿ.ಎಂ.ಕೆ.ವಿ.ವೈ. ಯೋಜನೆಯಡಿ 14000 ಅಭ್ಯರ್ಥಿಗಳಿಗೆ ತರಬೇತಿ ನೀಡುವ ಗುರಿ ಹೊಂದಲಾಗಿದೆ. |

ಸಂಖ್ಯೆ: ಕೌಉಜೀಇ 6 ಉಜೀಪ್ರ 2020

(ಡಾ|| ಸಿ.ಎನ್. ಅಶ್ವಥ್‌ನಾರಾಯಣ)
ಉಪ ಮುಖ್ಯಮಂತ್ರಿಗಳು ಮತ್ತು ಉನ್ನತ ಶಿಕ್ಷಣ,
ಐಟಿ/ಬಿಟಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು.

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1610 ರ ಅನುಬಂಧ (2019-20 ನೇ ಸಾಲಿನಲ್ಲಿ)

| ಕ್ರ. ಸಂ. | ಜಿಲ್ಲೆ | ಕೌಶಲ್ಯ ಮಿಷನ್‌ನಿಂದ ಯೋಜನಾ ಸೌಲಭ್ಯ ಪಡೆದ ಅಭ್ಯರ್ಥಿಗಳ ಸಂಖ್ಯೆ | | | |
|---|---|---|---|---|---|
| | | ಸಿಎಂಕೆಕೆವೈ | | ಪಿಎಂಕೆವಿವೈ | |
| | | ಪೂರ್ಣಗೊಂಡವು | ಪ್ರಗತಿಯಲ್ಲಿರುವವು | ಪೂರ್ಣಗೊಂಡವು | ಪ್ರಗತಿಯಲ್ಲಿರುವವು |
| 1 | ಬಾಗಲಕೋಟೆ | 447 | 60 | 0 | 0 |
| 2 | ಬೆಂಗಳೂರು (ಗ್ರಾ) | 1536 | 0 | 0 | 0 |
| 3 | ಬೆಳಗಾವಿ | 638 | 1130 | 600 | 300 |
| 4 | ಬಳ್ಳಾರಿ | 1049 | 237 | 60 | 90 |
| 5 | ಬೆಂಗಳೂರು (ನ) | 525 | 829 | 183 | 0 |
| 6 | ಬೀದರ್ | 1448 | 0 | 90 | 85 |
| 7 | ವಿಜಯಾಪುರ | 1393 | 1973 | 1256 | 949 |
| 8 | ಚಾಮರಾಜನಗರ | 1215 | 0 | 120 | 150 |
| 9 | ಚಿಕ್ಕಬಳ್ಳಾಪುರ | 109 | 856 | 420 | 209 |
| 10 | ಚಿಕ್ಕಮಗಳೂರು | 2007 | 0 | 157 | 169 |
| 11 | ಚಿತ್ರದುರ್ಗ | 942 | 2287 | 0 | 0 |
| 12 | ದಕ್ಷಿಣ ಕನ್ನಡ | 693 | 523 | 60 | 210 |
| 13 | ದಾವಣಗೆರೆ | 3437 | 0 | 329 | 224 |
| 14 | ಧಾರವಾಡ | 1704 | 3607 | 561 | 308 |
| 15 | ಗದಗ್ | 1798 | 0 | 210 | 270 |
| 16 | ಕಲ್ಬುರ್ಗಿ | 1810 | 1228 | 520 | 830 |
| 17 | ಹಾಸನ | 1036 | 1892 | 360 | 219 |
| 18 | ಹಾವೇರಿ | 393 | 269 | 329 | 599 |
| 19 | ಕೊಡಗು | 395 | 0 | 60 | 120 |
| 20 | ಕೋಲಾರ | 746 | 3 | 0 | 0 |
| 21 | ಕೊಪ್ಪಳ | 1012 | 673 | 0 | 0 |
| 22 | ಮಂಡ್ಯ | 1069 | 329 | 470 | 348 |
| 23 | ಮೈಸೂರು | 1557 | 1067 | 90 | 120 |
| 24 | ರಾಯಚೂರು | 898 | 1392 | 150 | 815 |
| 25 | ರಾಮನಗರ | 0 | 490 | 0 | 0 |
| 26 | ಶಿವಮೊಗ್ಗ | 1806 | 1620 | 75 | 357 |
| 27 | ತುಮಕೂರು | 1169 | 294 | 120 | 80 |
| 28 | ಉಡುಪಿ | 440 | 322 | 0 | 0 |
| 29 | ಉತ್ತರ ಕನ್ನಡ | 448 | 22 | 0 | 0 |
| 30 | ಯಾದಗಿರಿ | 569 | 210 | 60 | 120 |
| ಒಟ್ಟು | | 32289 | 14832 | 6280 | 6572 |

## ಜಿಲ್ಲಾ ಪ್ರಗತಿವಾರು ವಿವರ 2019–20

### ಪ್ರಧಾನ ಮಂತ್ರಿಕೌಶಲ್ಯ ವಿಕಾಸ ಯೋಜನೆ 2.0 (ಕೇಂದ್ರ ಪ್ರಾಯೋಜಿತರಾಜ್ಯ ನಿರ್ವಹಣೆ)

| ಕ್ರ ಸಂ | ಜಿಲ್ಲೆಗಳ ಹೆಸರು | ಪೂರ್ಣಗೊಂಡ ಅಭ್ಯರ್ಥಿಗಳ ವಿವರ | ಪ್ರಗತಿವಾರು | ಒಟ್ಟು |
|---|---|---|---|---|
| 1 | ಬೆಂಗಳೂರು ಗ್ರಾಮಾಂತರ ನಗರ | 183 | 0 | 183 |
| 2 | ಬೆಳಗಾಂ | 600 | 300 | 900 |
| 3 | ಬಳ್ಳಾರಿ | 60 | 90 | 150 |
| 4 | ಬೀದರ್ | 90 | 85 | 175 |
| 5 | ಚಾಮರಾಜನಗರ | 120 | 150 | 270 |
| 6 | ಚಿಕ್ಕಬಳ್ಳಾಪುರ | 420 | 209 | 629 |
| 7 | ಚಿಕ್ಕಮಗಳೂರು | 157 | 169 | 326 |
| 8 | ದಾವಣಗೆರೆ | 329 | 224 | 553 |
| 9 | ಧಾರವಾಡ | 561 | 308 | 869 |
| 10 | ಗದಗ | 210 | 270 | 480 |
| 11 | ಗುಲ್ಬರ್ಗಾ | 520 | 830 | 1350 |
| 12 | ಹಾಸನ | 360 | 219 | 579 |
| 13 | ಹಾವೇರಿ | 329 | 599 | 928 |
| 14 | ಕೊಡಗು | 60 | 120 | 180 |
| 15 | ಮಂಡ್ಯ | 470 | 348 | 818 |
| 16 | ಮಂಗಳೂರು | 60 | 210 | 270 |
| 17 | ಮೈಸೂರು | 90 | 120 | 210 |
| 18 | ರಾಯಚೂರು | 150 | 815 | 965 |
| 19 | ಶಿವಮೊಗ್ಗ | 75 | 357 | 432 |
| 20 | ತುಮಕೂರು | 120 | 80 | 200 |
| 21 | ವಿಜಯಪುರ | 1256 | 949 | 2205 |
| 22 | ಯಾದಗಿರಿ | 60 | 120 | 180 |
| | ಒಟ್ಟು : | 6280 | 6572 | 12852 |

**ಕರ್ನಾಟಕ ಸರ್ಕಾರ**

ಸಂಖ್ಯೆ: ಕೌಉಜೀಇ 06 ಕೈತಪ್ರ 2020

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 10/03/2020

96
4/5
12/3/20

ಇಂದ,
ಸರ್ಕಾರದ ಕಾರ್ಯದರ್ಶಿಗಳು,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.
ಬಹುಮಹಡಿ ಕಟ್ಟಡ, ಬೆಂಗಳೂರು.

ಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಲಿಂಗೇಶ.ಕೆ.ಎಸ್. (ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1651 ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಲಿಂಗೇಶ.ಕೆ.ಎಸ್. (ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1651 ಕ್ಕೆ ಸಂಬಂಧಿಸಿದಂತೆ ಉತ್ತರಗಳ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Srirangamma 10/3/2020
(ಶ್ರೀರಂಗಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.

# ಕರ್ನಾಟಕ ವಿಧಾನಸಭೆ

| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1651 |
|---|---|---|
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಲಿಂಗೇಶ.ಕೆ.ಎಸ್. (ಬೇಲೂರು) |
| 3) | ಉತ್ತರಿಸಬೇಕಾದ ದಿನಾಂಕ | 12/03/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆಯ ತರಬೇತಿ ಮತ್ತು ಉದ್ಯೋಗ ವಿಭಾಗಗಳ ವೃಂದ ಮತ್ತು ನೇಮಕಾತಿ ನಿಯಮಗಳು ನಿಗಧಿತ ಅವಧಿಗನುಸಾರ ಪರಿಷ್ಕರಣೆ ಮಾಡಲಾಗಿದೆಯೇ? (ಮಾಹಿತಿ ನೀಡುವುದು) | ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆಯಲ್ಲಿ ಉದ್ಯೋಗ ವಿಭಾಗದ ವೃಂದ ಮತ್ತು ನೇಮಕಾತಿ ನಿಯಮವನ್ನು ಪರಿಷ್ಕರಿಸಿ ದಿನಾಂಕ: 09.03.2020 ರಂದು ಆದೇಶ ಹೊರಡಿಸಲಾಗಿದೆ.<br><br>ತರಬೇತಿ ವಿಭಾಗದಲ್ಲಿ ವೃಂದ ಮತ್ತು ನೇಮಕಾತಿ ನಿಯಮವನ್ನು ಪರಿಷ್ಕರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಉದ್ಯೋಗ ವಿನಿಮಯ ಕೇಂದ್ರಗಳ ಕಾರ್ಯಗಳು ಯುವಶಕ್ತಿಯನ್ನೇ ಮುಖ್ಯವಾಗಿ ಒಳಗೊಂಡಿರುವುದರಿಂದ, ಸಾರ್ವಜನಿಕ ವಲಯದಲ್ಲಿರುವ ನಂಬಿಕೆ ಹಾಗೂ ವಿಶ್ವಾಸವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಅಭ್ಯರ್ಥಿಗಳನ್ನು ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ಆಯ್ಕೆ ಮಾಡುತ್ತಿದ್ದು ಈ ಸಂಬಂಧ ನೇಮಕಾತಿ ಪರೀಕ್ಷೆ ತೆಗೆದುಕೊಂಡಿರುವ / ತೆಗೆದುಕೊಳ್ಳಬಯಸುವ ಅಭ್ಯರ್ಥಿಗಳಿಗೆ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿನ **ಸ್ಟಡಿ ಸರ್ಕಲ್ಸ್** ಕಾರ್ಯಕ್ರಮದ ಮೂಲಕ ಉಚಿತ ಪರೀಕ್ಷಾಪೂರ್ವ ತರಬೇತಿಯನ್ನು ಆಯೋಜಿಸಲಾಗುತ್ತಿದೆ. ಅದೇ ರೀತಿ ಉದ್ಯೋಗ ಮೇಳಗಳನ್ನು ಆಯೋಜಿಸಿ ಉದ್ಯೋಗಾಕಾಂಕ್ಷಿಗಳನ್ನು ಮತ್ತು ನಿಯೋಜಕರನ್ನು ಒಂದೇ ವೇದಿಕೆಗೆ ತರಲಾಗುತ್ತಿದೆ. |
| ಇ) | ರಾಜ್ಯದಲ್ಲಿ ತಾಂತ್ರಿಕ ಶಿಕ್ಷಣ ನೀಡುವ ಸಂಸ್ಥೆಗಳನ್ನು ಒಂದೆಡೆ ತರುವಲ್ಲಿ ಕೈಗೊಂಡಿರುವ ಕ್ರಮಗಳೇನು? ತರಬೇತಿ ವಿಭಾಗದ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ತಾಂತ್ರಿಕ ಶಿಕ್ಷಣ ನೀಡುವುದರಿಂದ ಸದರಿ ತಾಂತ್ರಿಕ ವಿಭಾಗವನ್ನು ಶಿಕ್ಷಣ ಇಲಾಖೆಯೊಂದಿಗೆ ವಿಲೀನಗೊಳಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು.? | ಪ್ರಸ್ತಾವನೆ ಸಧ್ಯಕ್ಕೆ ಇರುವುದಿಲ್ಲ. |
| ಈ) | ಕೌಶಲ್ಯ ಮಿಷನ್ ಮುಖ್ಯ ಉದ್ದೇಶ ನಿರುದ್ಯೋಗ ಯುವಕ-ಯುವತಿಯರಿಗೆ ಕೌಶಲ್ಯ ತರಬೇತಿಗಳನ್ನು ನೀಡುವುದರ ಮುಖಾಂತರ ಉದ್ಯೋಗಾರ್ಹತೆಯನ್ನು ಹೆಚ್ಚಿಸಿ, ಉದ್ಯೋಗ ಕಲ್ಪಿಸಿಕೊಡುವುದೆ ಆಗಿರುತ್ತದೆ. ಕೌಶಲ್ಯಾಭಿವೃದ್ಧಿಯ ಬಹುತೇಕ ಚಟುವಟಿಕೆಗಳು ಉದ್ಯೋಗ ವಿನಿಮಯ ಕೇಂದ್ರಗಳ ಕಾರ್ಯಗಳಾಗಿರುವುದರಿಂದ ಕೌಶಲ್ಯ ಮಿಷನ್ ಚಟುವಟಿಕೆಗಳನ್ನು ಉದ್ಯೋಗ ವಿನಿಮಯ ಕೇಂದ್ರದ ಚಟುವಟಿಕೆಯೊಂದಿಗೆ ವಿಲೀನಗೊಳಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಪ್ರಸ್ತಾವನೆ ಸಧ್ಯಕ್ಕೆ ಇರುವುದಿಲ್ಲ. |

--2

| | | |
|---|---|---|
| ಉ) | ಇಲಾಖೆಯ ಅಡಿಯಲ್ಲಿ UNDP (ಯು.ಎನ್.ಡಿ.ಪಿ) ಯೋಜನೆಯ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ YES-PMU (ಎಸ್-ಪಿ.ಎಂ.ಯು) ಘಟಕವು ಉದ್ಯೋಗ ವಿನಿಮಯ ಕೇಂದ್ರಗಳ ಚಟುವಟಿಕೆಗಳಾದ ಅಭ್ಯರ್ಥಿಗಳ ನೋಂದಣಿ, ಸ್ಟಡಿಸರ್ಕಲ್, ಉದ್ಯೋಗ ಮೇಳ ವೃತ್ತಿ ಮಾರ್ಗದರ್ಶನ ಹಾಗು ಇತರೆ ಕಾರ್ಯಕ್ರಮಗಳನ್ನು ತನ್ನ ಕಾರ್ಯಗಳೆಂದು ವರದಿ ಮಾಡುತ್ತಿರುವ ಸರ್ಕಾರದ ಗಮನಕ್ಕೆ ಬಂದಿದೆಯೇ? ಹಾಗಿದ್ದಲ್ಲಿ, ನಕಲಿ ವರದಿಗಳನ್ನು ನಿಯಂತ್ರಿಸುವಲ್ಲಿ ಕೈಗೊಂಡಿರುವ ಕ್ರಮಗಳೇನು? ಈ ಯೋಜನೆ ಅಡಿಯಲ್ಲಿ ಬಿಡುಗಡೆಯಾಗಿರುವ ಅನುದಾನ ಎಷ್ಟು? (ಅನುದಾನದ ಬಳಕೆಯ ವಿವರ ನೀಡುವುದು) | ರಾಜ್ಯದ 29 ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ UNDP (ಯು.ಎನ್.ಡಿ.ಪಿ) ಸಹಯೋಗದೊಂದಿಗೆ YES ಕಾರ್ಯಕ್ರಮವನ್ನು ಆರಂಭಿಸಿದ್ದು ಇದರ ಉಸ್ತುವಾರಿಯನ್ನು ವಹಿಸಲು ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಯೂನಿಟ್ (PMU) ಅನ್ನು ಸಿ.ಐ.ಐ ಸಹಕಾರದೊಂದಿಗೆ ಆಯುಕ್ತಾಲಯದಲ್ಲಿ ವ್ಯವಸ್ಥೆಗೊಳಿಸಲಾಗಿದೆ. ಈ ಯೋಜನೆಯು ಪ್ರಮುಖವಾಗಿ ಉದ್ಯೋಗ ವಿನಿಮಯ ಕಚೇರಿಗಳಲ್ಲಿ ಲಭ್ಯವಿರುವ ಮಾನವ ಸಂಪನ್ಮೂಲಕ್ಕೆ ಅಗತ್ಯ ತರಬೇತಿ ಮೂಲಕ ಚುರುಕುಗೊಳಿಸುವುದು ಉದ್ಯೋಗ ವಿನಿಮಯ ಕಚೇರಿಗಳಿಗೆ ವೆಬ್‌ಸೈಟ್ ತಯಾರಿಸುವುದು ಖಾಸಗಿ ನಿಯೋಜಕರ ಸಹಕಾರದೊಂದಿಗೆ ಒಂದು ಟಾಸ್ಕ್ ಫೋರ್ಸ್ ಸಮಿತಿ ರಚಿಸುವುದು, ಅಭ್ಯರ್ಥಿಗಳಿಗೆ ತರಬೇತಿ ನೀಡಿ ಸೂಕ್ತ ಉದ್ಯೋಗ ದೊರಕಿಸುವ ಅಂಶಗಳನ್ನು ಒಳಗೊಂಡಿರುತ್ತದೆ. ಸದರಿ ಕಾರ್ಯಗಳನ್ನು ನಿರ್ವಹಿಸಲು UNDP ರೂ. 1.16 ಕೋಟಿ ಹಣವನ್ನು ಬಿಡುಗಡೆ ಮಾಡಿರುತ್ತದೆ. ಇದುವರೆಗೂ ಒಟ್ಟು ರೂ.1.03 ಕೋಟಿ ವೆಚ್ಚ ಮಾಡಲಾಗಿದೆ. YES-PMU (ಎಸ್-ಪಿ.ಎಂ.ಯು) ಉದ್ಯೋಗ ವಿನಿಮಯ ಕಚೇರಿಗಳ ಅಂಕಿ ಅಂಶವನ್ನು ಸಂಗ್ರಹಿಸಿ ಕ್ರೋಢೀಕರಣ ಮಾತ್ರ ಮಾಡುತ್ತಿರುವುದರಿಂದ ಡೂಪ್ಲಿಕೇಶನ್‌ಗೆ ಅವಕಾಶವಿರುವುದಿಲ್ಲ. |
| ಊ) | ಬೃಹತ್ ಉದ್ಯೋಗ ಮೇಳಗಳ ಫಲಿತಾಂಶ ನಿರಾಶಾದಾಯಕವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಉದ್ಯೋಗಾಕಾಂಕ್ಷಿಗಳಿಗೆ ಉಪಯೋಗ ಆಗುವಂತಹ ಉದ್ಯೋಗ ಮೇಳಗಳನ್ನು ಆಯೋಜಿಸಲು ಕ್ರಮ ಕೈಗೊಳ್ಳುವುದೆ? | ಇಲ್ಲ.<br>ಆದರೆ, ರಾಜ್ಯದಲ್ಲಿ ಮಿನಿ, ಬೃಹತ್ ಉದ್ಯೋಗ ಮೇಳಗಳನ್ನು ಆಯೋಜಿಸಿ ವಿದ್ಯಾವಂತ ಯುವಕ, ಯುವತಿಯರಿಗೆ ಉದ್ಯೋಗವಕಾಶವನ್ನು ಕಲ್ಪಿಸಿಕೊಡಲು ಕ್ರಮವಹಿಸಲಾಗುತ್ತಿದೆ. |
| ಋ) | ಉದ್ಯೋಗ ವಿನಿಮಯ ಕೇಂದ್ರಗಳಿಗೆ ಕಾಯಕಲ್ಪ ನೀಡುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ಉದ್ಯೋಗ ವಿಭಾಗದ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಸ್ಟಡಿ ಸರ್ಕಲ್ ಮೂಲಕ ಉಚಿತ ಪರೀಕ್ಷಾಪೂರ್ವ ತರಬೇತಿ ಮತ್ತು ಉದ್ಯೋಗ ಮೇಳಗಳನ್ನು ಆಯೋಜಿಸಲು ಅಗತ್ಯ ಮೂಲಭೂತ ಸೌಲಭ್ಯ ಒದಗಿಸಿದ್ದು ಪೂರಕವಾಗಿ YES (ಎಸ್) ಕಾರ್ಯಕ್ರಮ ಮೂಲಕ ಸೂಕ್ತ ಕಾರ್ಯಾಗಾರ/ತರಬೇತಿ ನೀಡುವ ಮೂಲಕ ಉದ್ಯೋಗ ವಿನಿಮಯ ಕಚೇರಿಗಳನ್ನು ಉದ್ಯೋಗಾಕಾಂಕ್ಷಿ ಮತ್ತು ನಿಯೋಜಕರ ಸ್ನೇಹಿಯಾಗಿ ಮಾರ್ಪಡಿಸಲಾಗಿದೆ. |
| ಎ) | ಇಲಾಖೆಯಲ್ಲಿನ ಮಂಜೂರಾದ ಹುದ್ದೆಗಳನ್ನು ಮೇಲ್ದರ್ಜೆಗೇರಿಸುವ ಅಥವಾ ಪುನರ್ ವಿನ್ಯಾಸಗೊಳಿಸುವ ಬಗ್ಗೆ ಕೈಗೊಂಡ ಕ್ರಮಗಳೇನು<br><br>ಉದ್ಯೋಗ ವಿಭಾಗದ ಅಧಿಕಾರಿಗಳಿಗೆ ಹಾಗೂ ಸಿಬ್ಬಂದಿಗಳಿಗೆ ಪದೋನ್ನತಿ ನೀಡುವಲ್ಲಿ ಅನಗತ್ಯ ವಿಳಂಬವುಂಟಾಗಲು ಕಾರಣವೇನು? | ಸಧ್ಯಕ್ಕೆ ಇಂತಹ ಪ್ರಸ್ತಾವನೆ ಇರುವುದಿಲ್ಲ.<br><br>ಈಗಾಗಲೇ 05 ಉದ್ಯೋಗಾಧಿಕಾರಿಗಳಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಬಡ್ತಿ ನೀಡಲಾಗಿದೆ. ಖಾಲಿ ಇರುವ ಗ್ರೂಪ್-ಸಿ ಹುದ್ದೆಗಳಿಗೆ ಆಯುಕ್ತರ ಹಂತದಲ್ಲಿ ಬಡ್ತಿ ನೀಡಲು ಕ್ರಮವಹಿಸಲಾಗುತ್ತಿದೆ. |

| | | |
|---|---|---|
| | ಸದರಿ ಕೇಂದ್ರಗಳಲ್ಲಿ ಉದ್ಯೋಗಾಕಾಂಕ್ಷಿಗಳಿಗೆ ಅನುಕೂಲವಾಗುವಂತಹ ನೂತನ ಯೋಜನೆಗಳನ್ನು ಜಾರಿಗೆ ತರಲಾಗಿದೆಯೇ? (ವರ್ಷಾವಾರು ವಿವರ ನೀಡುವುದು) | ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಉದ್ಯೋಗಾಕಾಂಕ್ಷಿಗಳಿಗೆ ಅನುಕೂಲವಾಗುವಂತೆ ಈ ಕೆಳಕಂಡ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತಿದೆ.<br><br>ಅ) <u>ಸ್ಟಡಿ ಸರ್ಕಲ್ಸ್</u>:- ಎಲ್ಲಾ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಉದ್ಯೋಗಾಕಾಂಕ್ಷಿಗಳು ವಿವಿಧ ನೇಮಕಾತಿ ಪರೀಕ್ಷೆಗಳನ್ನು ವಿಶ್ವಾಸದಿಂದ ಎದುರಿಸುವಂತಾಗಲು **<u>'ಸ್ಟಡಿ ಸರ್ಕಲ್ಸ್'</u>** ಕಾರ್ಯಕ್ರಮದಡಿ ಉಚಿತ ನೇಮಕಾತಿ ಪರೀಕ್ಷಾ ಪೂರ್ವ ತರಬೇತಿಗಳನ್ನು ಆಯೋಜಿಸುತ್ತಿವೆ. ನೇಮಕಾತಿ ಪರೀಕ್ಷೆ ತೆಗೆದುಕೊಂಡಿರುವ ಅಥವಾ ತೆಗೆದುಕೊಳ್ಳಬಯಸುವ ಎಲ್ಲಾ ವಿದ್ಯಾವಂತ ನಿರುದ್ಯೋಗಿಗಳು ಈ ಯೋಜನೆಯ ಪ್ರಯೋಜನ ಪಡೆಯಬಹುದು.<br><br>2019-20 ಸಾಲಿನಲ್ಲಿ 66 ಸ್ಟಡಿ ಸರ್ಕಲ್ ಕಾರ್ಯಕ್ರಮಗಳನ್ನು ಆಯೋಜಿಸಿ ಆ ಮೂಲಕ 1442 ಮಹಿಳೆಯರು ಸೇರಿದಂತೆ ಒಟ್ಟು 3,703 ನಿರುದ್ಯೋಗಿಗಳಿಗೆ ಉಚಿತ ಪರೀಕ್ಷಾ ಪೂರ್ವ ತರಬೇತಿ ನೀಡಲಾಗಿದೆ.<br><br>ಆ) <u>ಉದ್ಯೋಗಮೇಳ</u>:- ಖಾಸಗಿ ಕ್ಷೇತ್ರದಲ್ಲಿನ ವಿಫುಲ ಉದ್ಯೋಗಾವಕಾಶಗಳನ್ನು ನಿರುದ್ಯೋಗಿ ಪದವೀಧರರಿಗೆ ತಲುಪಿಸಲು ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳ ಮೂಲಕ ಮಿನಿ ಉದ್ಯೋಗ ಮೇಳ'ಗಳನ್ನು ಆಯೋಜಿಸಲಾಗುತ್ತಿದೆ..<br><br>2019-20 ಸಾಲಿನಲ್ಲಿ 180 ಮಿನಿ ಉದ್ಯೋಗ ಮೇಳಗಳನ್ನು ಆಯೋಜಿಸಿದ್ದು 3507 ಮಹಿಳಾ ಅಭ್ಯರ್ಥಿಗಳೂ ಸೇರಿದಂತೆ ಒಟ್ಟು 15,508 ಅಭ್ಯರ್ಥಿಗಳಿಗೆ ಉದ್ಯೋಗ ಆಹ್ವಾನ ಪತ್ರ (Offer Letter) ನೀಡಲಾಗಿದೆ. |
| ಏ) | ಕಾಲೇಜು ತಾಂತ್ರಿಕ ಸಾರ್ವಜನಿಕ ಪದವಿ ಪೂರ್ವ ಶಿಕ್ಷಣ ಇಲಾಖೆಗಳು ಹಾಗು ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ, ನೇಮಕಾತಿ ಪರೀಕ್ಷೆಗಳಿಗೆ ತರಬೇತಿ, ಕೌಶಲ್ಯಾಭಿವೃದ್ಧಿ, ನೇಮಕಾತಿ ಚಟುವಟಿಕೆ ಹಾಗೂ ಇತರೆ ಉದ್ಯೋಗಾರ್ಹತೆ ಹೆಚ್ಚಿಸುವ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸದರಿ ಕ್ಷೇತ್ರದಲ್ಲಿನ ಪರಿಣಿತಿ ಹಾಗೂ ಅನುಭವ ಹೊಂದಿರುವ ಉದ್ಯೋಗ ವಿಭಾಗದ ಜಂಟಿ/ಉಪ ನಿರ್ದೇಶಕರುಗಳನ್ನು ನಿಯೋಜಿಸುವ ನಿಟ್ಟಿನಲ್ಲಿ ಸರ್ಕಾರದ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಜಿಲ್ಲಾ ಉದ್ಯೋಗ ವಿನಿಮಯ ಕಚೇರಿ ಅಧಿಕಾರಿಗಳು ತಮ್ಮ ವ್ಯಾಪ್ತಿಯ ಶಿಕ್ಷಣ ಸಂಸ್ಥೆಗಳಿಗೆ ಭೇಟಿ ನೀಡಿ ವಿವಿಧ ಜಾಹಿರಾತುಗಳು, ರಕ್ಷಣಾ ಪಡೆಗಳಲ್ಲಿನ ಉದ್ಯೋಗವಕಾಶ, ಶಿಕ್ಷಣ/ತರಬೇತಿ ಲಭ್ಯತೆ ಮುಂತಾದ ಅಂಶಗಳ ಬಗ್ಗೆ ವೃತ್ತಿ ಮಾರ್ಗದರ್ಶನ ನೀಡಲು ಕ್ರಮವಹಿಸಲಾಗುತ್ತಿದೆ. |

| | | |
|---|---|---|
| ಐ) | ಉದ್ಯೋಗ ಇಲಾಖೆಯಲ್ಲಿ ಖಾಲಿಯಿರುವ "ಗ್ರೂಪ್–ಬಿ, ಸಿ ಹಾಗೂ ಡಿ" ವೃಂದದ ಹುದ್ದೆಗಳನ್ನು ಭರ್ತಿ ಮಾಡಲು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಇಲಾಖೆಯ ತರಬೇತಿ ವಿಭಾಗದಲ್ಲಿ ವಿವಿಧ ವೃಂದಗಳಲ್ಲಿ ಒಟ್ಟಾರೆ 3497 ಖಾಲಿಯಿರುವ ಈ ಕೆಳಕಂಡ ಹುದ್ದೆಗಳನ್ನು ಕರ್ನಾಟಕ ಲೋಕ ಸೇವಾ ಆಯೋಗದಿಂದ ಭರ್ತಿ ಮಾಡಲು ಕ್ರಮವಹಿಸಲಾಗಿದೆ.<br>1. ಪ್ರಾಚಾರ್ಯರು ದರ್ಜೆ–2 – 36,<br>2. ಪ್ರಥಮ ದರ್ಜೆ ಸಹಾಯಕರು– 78<br>3. 1520 ಕಿರಿಯ ತರಬೇತಿ ಅಧಿಕಾರಿಗಳನ್ನು ಕೆ.ಪಿ.ಎಸ್.ಸಿ ಮುಖಾಂತರ ನೇಮಕಾತಿ ಮಾಡಿಕೊಳ್ಳುವ ಪ್ರಕ್ರಿಯೆ ಅಂತಿಮ ಹಂತದಲ್ಲಿರುತ್ತದೆ.<br>4. ಗ್ರೂಪ್–ಡಿ 1048 ಹುದ್ದೆಗಳು ಖಾಲಿ ಇದ್ದು, ಸಧ್ಯಕ್ಕೆ 540 ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಅನುಮತಿಯನ್ನು ನೀಡಲಾಗಿದೆ.<br>5. ಹೈದ್ರಾಬಾದ್ ಕರ್ನಾಟಕದ ಪ್ರಥಮ ದರ್ಜೆ ಸಹಾಯಕರು– 15<br>6. ಹೈದ್ರಾಬಾದ್ ಕರ್ನಾಟಕದ ದ್ವಿತೀಯ ದರ್ಜೆ ಸಹಾಯಕರು– 13<br>7. ಹೈದ್ರಾಬಾದ್ ಕರ್ನಾಟಕದ ಶೀಘ್ರಲಿಪಿಗಾರರ– 01 ಹುದ್ದೆ ಮತ್ತು<br>8. ಹೈದ್ರಾಬಾದ್ ಕರ್ನಾಟಕದ ಬೆರಳಚ್ಚುಗಾರರ 02 ಹುದ್ದೆಗಳು.<br>9. ವಿವಿಧ ವೃಂದಗಳಲ್ಲಿ 461 ಹುದ್ದೆಗಳಿಗೆ ಮುಂಬಡ್ತಿಗೆ ಕ್ರಮವಹಿಸಲಾಗುತ್ತಿದೆ.<br><br>ಖಾಲಿ ಉಳಿಯುವ ವಿವಿಧ ವೃಂದಗಳ 831 ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುವುದು.<br><br>ಇಲಾಖೆಯ ಉದ್ಯೋಗ ವಿಭಾಗದಲ್ಲಿ ಖಾಲಿಯಿರುವ 9 ಗ್ರೂಪ್–ಬಿ ಹುದ್ದೆಗಳ ಆಯ್ಕೆ ಪಟ್ಟಿ ಕೆ.ಪಿ.ಎಸ್.ಸಿ ಯಿಂದ ಸ್ವೀಕೃತವಾಗಿದ್ದು ನೇಮಕಾತಿ ಪ್ರಕ್ರಿಯೆಯಲ್ಲಿದೆ. ಗ್ರೂಪ್–ಸಿ ಹುದ್ದೆಗಳಾದ 1 ಪ್ರಥಮ ದರ್ಜೆ ಸಹಾಯಕ ನೇರ ನೇಮಕಾತಿಯನ್ನು ಕೆ.ಪಿ.ಎಸ್.ಸಿ ಗೆ ದಿನಾಂಕ 31-1-2020 ರಂದು ಅಧಿಸೂಚಿಸಲಾಗಿದ್ದು ಉಳಿದಂತೆ ಖಾಲಿಯಿರುವ ನೇರ ನೇಮಕಾತಿಯ 40 ಹುದ್ದೆಗಳನ್ನು ಹಾಗೂ ಬಡ್ತಿ ಮೂಲಕ 20 ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. |
| ಒ) | ಉದ್ಯೋಗ ವಿನಿಮಯ ಕೇಂದ್ರಗಳನ್ನು ಉದ್ಯೋಗ ವಿನಿಮಯ ಹಾಗೂ ಕೌಶಲ್ಯಾಭಿವೃದ್ಧಿ ಕೇಂದ್ರಗಳಾಗಿ ಪರಿವರ್ತಿಸುವ ಆಲೋಚನೆ ಸರ್ಕಾರದ ಮುಂದಿದೆಯೇ? ಆಗಿದ್ದರೆ ಇಲ್ಲಿಯವರೆಗೆ ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು. | ಇಲ್ಲ. |

**ಸಂಖ್ಯೆ: ಕೌಉಜೀಇ 06 ಕೈತಪ್ರ 2020**

**(ಡಾ.ಸಿ.ಎನ್.ಅಶ್ವತ್ಥ ನಾರಾಯಣ)**
**ಉಪ ಮುಖ್ಯಮಂತ್ರಿಗಳು ಹಾಗೂ**
**ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು**
**ಜೀವನೋಪಾಯ ಸಚಿವರು**

**ಕರ್ನಾಟಕ ಸರ್ಕಾರ**

ಸಂಖ್ಯೆ: ಕೌಉಜೀಇ 04 ಕೈತಪ್ರ 2020

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 10/03/2020

167
CIS
12/3/20

ಇಂದ,
ಸರ್ಕಾರದ ಕಾರ್ಯದರ್ಶಿಗಳು,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.
ಬಹುಮಹಡಿ ಕಟ್ಟಡ, ಬೆಂಗಳೂರು.

ಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1629 ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1629 ಕ್ಕೆ ಸಂಬಂಧಿಸಿದಂತೆ ಉತ್ತರಗಳ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Srirangamma 10/3/2020
(ಶ್ರೀರಂಗಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1629 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) |
| 3) | ಉತ್ತರಿಸಬೇಕಾದ ದಿನಾಂಕ | 12/03/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನಡೆಯುತ್ತಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಂಖ್ಯೆ ಎಷ್ಟು; | 270 |
| ಆ) | ಇವುಗಳಲ್ಲಿ ಸ್ವಂತ ಕಟ್ಟಡ ಹೊಂದಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು ಯಾವುವು: | 135<br>ಅನುಬಂಧ ಲಗತ್ತಿಸಿದೆ. |
| ಇ) | ನಿಡಗುಂದಿಯಲ್ಲಿ ನಡೆಯುತ್ತಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಸ್ವಂತ ನಿವೇಶನವನ್ನು ಪಡೆಯಲು ಏನು ಕ್ರಮ ಕೈಗೊಳ್ಳಲಾಗಿದೆ. | ನಿಡಗುಂದಿಯಲ್ಲಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಮಣಗೂರು ಪುನರ್ ವಸತಿ ಕೇಂದ್ರದಲ್ಲಿ ರಿ.ಸ.ನಂ:309 ರಲ್ಲಿ 6.00 ಎಕರೆ ಜಮೀನಿನ ಪೈಕಿ 2.00 ಎಕರೆ ಜಮೀನನ್ನು ಹಸ್ತಾಂತರಿಸಲು ಕೃಷ್ಣ ಭಾಗ್ಯ ಜಲ ನಿಗಮಕ್ಕೆ ಕೋರಿಕೆ ಸಲ್ಲಿಸಿದ್ದು, ಮಂಜೂರಾತಿ ಪಡೆಯಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಬಸವನಬಾಗೇವಾಡಿಯಲ್ಲಿ ನಡೆಯುತ್ತಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಕಟ್ಟಡ ನಿರ್ಮಿಸಲು ಇದೂವರೆಗೆ ಕೈಗೊಂಡಿರುವ ಕ್ರಮಗಳೇನು: | ಬಸವನಬಾಗೇವಾಡಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ನಬಾರ್ಡ್ ಆರ್.ಐ.ಡಿ.ಎಫ್.23ರ ಯೋಜನೆಯಡಿ ರೂ.200.00 ಲಕ್ಷಗಳ ಅಂದಾಜು ಮೊತ್ತದಲ್ಲಿ ಕಟ್ಟಡ ನಿರ್ಮಾಣ ಪ್ರಗತಿಯಲ್ಲಿದೆ. |
| ಉ) | ಈ ಸಂಸ್ಥೆಗಳಿಗೆ ಸ್ವಂತ ಕಟ್ಟಡ ನಿರ್ಮಿಸಲು ಆಗುತ್ತಿರುವ ವಿಳಂಬಕ್ಕೆ ಕಾರಣಗಳೇನು: | ನಿಡಗುಂದಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ನಿವೇಶನ ಪಡೆಯಲು ಕ್ರಮವಹಿಸಲಾಗಿದೆ ಹಾಗೂ ಬಸವನಬಾಗೇವಾಡಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 13 ಎಲ್‌ಜಿಪಿ 2019 ದಿನಾಂಕ: 12-11-2019ರಲ್ಲಿ ನಿವೇಶನ ಮಂಜೂರಾಗಿದ್ದು, ಕಟ್ಟಡ ಕಾಮಗಾರಿ ಪ್ರಗತಿಯಲ್ಲಿದೆ. |
| ಊ) | ಯಾವ ನಿರ್ದಿಷ್ಟ ಕಾಲಮಿತಿಯೊಳಗೆ ಸ್ವಂತ ಕಟ್ಟಡಗಳನ್ನು ನಿರ್ಮಿಸಲಾಗುವುದು? (ವಿವರ ನೀಡುವುದು) | ನಿಡಗುಂದಿ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ನಿವೇಶನ ಲಭ್ಯವಾದ ನಂತರ ಕ್ರಮವಹಿಸಲಾಗುವುದು. |

**ಸಂಖ್ಯೆ: ಕೌಉಜೀಇ 04 ಕೈತಪ್ರ 2020**

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

ಅನುಬಂಧ

ಉದ್ಯೋಗ ಮತ್ತು ತರಬೇತಿ ಇಲಾಖೆ

ಸ್ವಂತ ಕಟ್ಟಡ ಹೊಂದಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳ ವಿವರ 6-03-2020

| ಕ್ರ. ಸಂ | ಜಿಲ್ಲೆ | | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು | ಕ್ರ. ಸಂ | ಜಿಲ್ಲೆ | | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು |
|---|---|---|---|---|---|---|---|
| 1 | 2 | 3 | 4 | | | | |
| 1 | ಬೆಂಗಳೂರು ನಗರ | 1 | ಬಿ.ಟಿ.ಸೆಂಟರ್ | 9 | ಮೈಸೂರು | 37 | ಹೆಚ್.ಡಿ.ಕೋಟೆ |
| | | 2 | ಹೊಸೂರು ರಸ್ತೆ, ಬೆಂ-29 | | | 38 | ಹುಣಸೂರು |
| | | 3 | ಹೊಸೂರು ರಸ್ತೆ, ಬೆಂ- | | | 39 | ಮೈಸೂರು-07 |
| | | 4 | ತುಮಕೂರು ರಸ್ತೆ, ಬೆಂ-22 | | | 40 | ಮೈಸೂರು-18 |
| | | 5 | ವಿಲ್ಸನ್‌ಗಾರ್ಡನ್, ಬೆಂ-27 | | | 41 | ಪಿರಿಯಾಪಟ್ಟಣ |
| 2 | ಬೆಂಗಳೂರು | 6 | ದೇವನಹಳ್ಳಿ | | | 42 | ನಂಜನಗೂಡು |
| | | 7 | ಹೊಸಕೋಟೆ | | | 43 | ಬೀರಿಹುಂಡಿ |
| | | 8 | ಕನಕಪುರ | | | 44 | ವರುಣ |
| | | 9 | ರಾಮನಗರ | 10 | ಚಾಮರಾಜನಗರ | 45 | ಕೊಳ್ಳೇಗಾಲ |
| 3 | ಚಿಕ್ಕಬಳ್ಳಾಪುರ | 10 | ಗೌರಿಬಿದನೂರು | | | 46 | ಬೇಗೂರು |
| | | 11 | ಬಾಗೇಪಲ್ಲಿ | | | 47 | ಗುಂಡ್ಲುಪೇಟೆ (ಮ) |
| | | 12 | ಶಿಡ್ಲಘಟ್ಟ | 11 | ಹಾಸನ | 48 | ಚನ್ನರಾಯಪಟ್ಟಣ (ಮ) |
| | | 13 | ಮಂಡಿಕಲ್ಲು | | | 49 | ಹಾಸನ |
| 4 | ಕೋಲಾರ | 14 | ಕೆ.ಜಿ.ಎಫ್ | | | 50 | ಹೊಳೆನರಸೀಪುರ |
| | | 15 | ಕೋಲಾರ(ಮ) | | | 51 | ಪಡುವಲಹಿಪ್ಪೆ |
| | | 16 | ದೇವರಾಯಸಮುದ್ರ | | | 52 | ಉದಯಪುರ |
| 5 | ತುಮಕೂರು | 17 | ಅಮ್ಮಸಂದ್ರ | | | 53 | ಹರಿಹರಪುರ |
| | | 18 | ತುರುವೇಕೆರೆ | | | 54 | ಅರಸೀಕೆರೆ |
| | | 19 | ಶಿರಾ | | | 55 | ಮೊಸಳೇಹೊಸಹಳ್ಳಿ |
| | | 20 | ತಿಪಟೂರು (ಮ) | 12 | ಮಂಡ್ಯ | 56 | ಕೆ.ಆರ್.ಪೇಟೆ |
| | | 21 | ಕುಣಿಗಲ್ | | | 57 | ಮದ್ದೂರು |
| | | 22 | ಕೊರಟಗೆರೆ | | | 58 | ಮಳವಳ್ಳಿ |
| | | 23 | ಮಧುಗಿರಿ | | | 59 | ಮಂಡ್ಯ |
| 6 | ಶಿವಮೊಗ್ಗ | 24 | ಭದ್ರಾವತಿ | | | 60 | ಪಾಂಡವಪುರ |
| | | 25 | ಶಿವಮೊಗ್ಗ (ಮ) | | | 61 | ನಾಗಮಂಗಲ |
| | | 26 | ಶಿಕಾರಿಪುರ | 13 | ಕೊಡಗು | 62 | ಮಡಿಕೇರಿ |
| | | 27 | ತೀರ್ಥಹಳ್ಳಿ | | | 63 | ಪೊನ್ನಂಪೇಟೆ -D |
| | | 28 | ಸಾಗರ | | | 64 | ಆಲೂರು-ಸಿದ್ಧಾಪುರ |
| 7 | ಚಿತ್ರದುರ್ಗ | 29 | ಹಿರಿಯೂರು | 14 | ದಕ್ಷಿಣ ಕನ್ನಡ | 65 | ಬೆಳ್ತಂಗಡಿ |
| | | 30 | ಭರಮಸಾಗರ | | | 66 | ಮಂಗಳೂರು |
| | | 31 | ಚಳ್ಳಕೆರೆ | | | 67 | ಮಂಗಳೂರು(ಮ) |
| | | 32 | ಚಿತ್ರದುರ್ಗ (ಮ) | | | 68 | ಪುತ್ತೂರು (ಮ) |
| | | 33 | ಪರಶುರಾಂಪುರ | 15 | ಉಡುಪಿ | 69 | ಉಡುಪಿ |
| | | 34 | ಹೊಸದುರ್ಗ | | | 70 | ಪೆರ್ಡೂರು |
| 8 | ದಾವಣಗೆರೆ | 35 | ದಾವಣಗೆರೆ | 16 | ಚಿಕ್ಕಮಗಳೂರು | 71 | ಕಡೂರು |
| | | 36 | ಚನ್ನಗಿರಿ | | | 72 | ತರೀಕೆರೆ |
| | | | | | | 73 | ಚಿಕ್ಕಮಗಳೂರು |
| | | | | | | 74 | ಶಿವನಿ |
| | | | | | | 75 | ಕೊಪ್ಪ |

| ಕ್ರ. ಸಂ | ಜಿಲ್ಲೆ | | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು | ಕ್ರ. ಸಂ | ಜಿಲ್ಲೆ | | ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು |
|---|---|---|---|---|---|---|---|
| 17 | ಬೆಳಗಾವಿ | 76 | ಕಿತ್ತೂರು | 23 | ಗುಲ್ಬರ್ಗಾ | 104 | ಗುಲ್ಬರ್ಗಾ(ಸಂಯುಕ್ತ) |
| | | 77 | ಬೆಳಗಾವಿ(ಮ) | | | 105 | ಗುಲ್ಬರ್ಗಾ (ಮ) |
| | | 78 | ಬೆಳಗಾವಿ (ಮ) | | | 106 | ವಾಡಿ |
| 18 | ಧಾರವಾಡ | 79 | ಧಾರವಾಡ | | | 107 | ಜೇವರ್ಗಿ |
| | | 80 | ಹುಬ್ಬಳ್ಳಿ | | | 108 | ಅಫಜಲಪುರ |
| | | 81 | ಕಲಘಟಗಿ | | | 109 | ಸೇಡಂ |
| 19 | ಗದಗ | 82 | ನರಗುಂದ | | | 110 | ಚಿಂಚೋಳಿ |
| | | 83 | ಮುಂಡರಗಿ | 24 | ಯಾದ್ಗಿರ್ | 111 | ಗುರುಮಿಟ್ಕಲ್ |
| | | 84 | ಸೂಡಿ | 27 | ಬಳ್ಳಾರಿ | 112 | ಕೂಡ್ಲಿಗಿ |
| | | 85 | ಗದಗ (ಮ) | | | 113 | ವಿಠಲಾಪುರ |
| | | 86 | ಕುರ್ತಕೋಟೆ | | | 114 | ಇಟಗಿ |
| | | 87 | ಶಿಗ್ಗಾಂವ | | | 115 | ಬಳ್ಳಾರಿ |
| | | 88 | ಅಕ್ಕಿ ಆಲೂರು | | | 116 | ಹೂವಿನಹಡಗಲಿ |
| | | 89 | ಗುತ್ತಲ | | | 117 | ಸಂಡೂರು |
| 20 | ಉತ್ತರ ಕನ್ನಡ | 90 | ಹಳಿಯಾಳ | | | 118 | ಹೊಳಲು |
| | ಕಾರವಾರ | 91 | ಹೊನ್ನಾವರ | | | 119 | ಕುಡಿತಿನಿ |
| | | 92 | ದಾಂಡೇಲಿ (ಮ) | | | 120 | ಹೊಸಪೇಟೆ |
| | | 93 | ಕಾರವಾರ | | | 121 | ಹಂಪಸಾಗರ |
| | | 94 | ಮುಂಡಗೋಡು | 25 | ಬೀದರ್ | 122 | ಹುಮ್ನಾಬಾದ್ |
| | | 95 | ವಾಳಾ | | | 123 | ಬೀದರ್ |
| | | 96 | ಸಿದ್ಧಾಪುರ | | | 124 | ಬಸವಕಲ್ಯಾಣ |
| | | 97 | ರಾಮನಗರ(ಜೋಯಿಡಾ) | 26 | ರಾಯಚೂರು | 125 | ರಾಯಚೂರು |
| 21 | ಬಿಜಾಪುರ | 98 | ಬಬಲೇಶ್ವರ | | | 126 | ದೇವದುರ್ಗಾ |
| | | 99 | ಬಿಜಾಪುರ | | | 127 | ಲಿಂಗಸಗೂರು |
| | | 100 | ನಲತ್ವಾಡ (ಮ) | | | 128 | ಮುದಗಲ್ |
| 22 | ಬಾಗಲಕೋಟೆ | 101 | ಬಾಗಲಕೋಟೆ (ಮ) | 27 | ಕೊಪ್ಪಳ | 129 | ಕುಕನೂರ್ |
| | | 102 | ಬೀಳಗಿ | | | 130 | ತಳಕಲ್ ಗ್ರಾಮ |
| | | 103 | ಜಮಖಂಡಿ | | | 131 | ಗಂಗಾವತಿ |
| | | | | | | 132 | ಯಲಬುರ್ಗಾ |
| | | | | | | 133 | ಕೊಪ್ಪಳ |
| | | | | | | 134 | ಮಂಗಳೂರುಗ್ರಾಮ |
| | | | | | | 135 | ಹನುಮಸಾಗರ |
| | | | | | ಒಟ್ಟು | 135 | |

## ಕರ್ನಾಟಕ ಸರ್ಕಾರ

ಸಂಖ್ಯೆ: ಕೌಉಜೀಇ 09 ಕೈತಪ್ರ 2020

ಕರ್ನಾಟಕ ಸರ್ಕಾರ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 10/03/2020

137
12/3/20

ಇಂದ,
ಸರ್ಕಾರದ ಕಾರ್ಯದರ್ಶಿಗಳು,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.
ಬಹುಮಹಡಿ ಕಟ್ಟಡ, ಬೆಂಗಳೂರು.

ಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜೀವ್.ಪಿ (ಕುಡಚಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1637 ಕ್ಕೆ ಉತ್ತರಿಸುವ ಬಗ್ಗೆ.

*****

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರಾಜೀವ್.ಪಿ (ಕುಡಚಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1637 ಕ್ಕೆ ಸಂಬಂಧಿಸಿದಂತೆ ಉತ್ತರಗಳ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

Sriranganna 10/3/2020
(ಶ್ರೀರಂಗಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಇಲಾಖೆ.

# ಕರ್ನಾಟಕ ವಿಧಾನಸಭೆ

| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1637 |
|---|---|---|
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ರಾಜೀವ್.ಪಿ. (ಕುಡಚಿ) |
| 3) | ಉತ್ತರಿಸಬೇಕಾದ ದಿನಾಂಕ | 12/03/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕದಲ್ಲಿ ಇರುವ ನಿರುದ್ಯೋಗಿಗಳ ಸಂಖ್ಯೆ ಎಷ್ಟು; ನಿರುದ್ಯೋಗ ನಿವಾರಣೆಗಾಗಿ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ. | ರಾಜ್ಯದ ಎಲ್ಲಾ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಒಟ್ಟು 3,44,174 ಅಭ್ಯರ್ಥಿಗಳು (ಫೆಬ್ರವರಿ–2020ರ ಅಂತ್ಯಕ್ಕೆ) ಹಾಗೂ ಕೌಶಲ್ ಕಾರ್ ವೆಬ್ ಪೋರ್ಟ್‌ಲ್ ನಲ್ಲಿ 10,40,000 ಅಭ್ಯರ್ಥಿಗಳು ನೊಂದಾಯಿಸಿಕೊಂಡಿರುತ್ತಾರೆ.<br><br>ಮುಖ್ಯಮಂತ್ರಿ ಕೌಶಲ್ಯ ವಿಕಾಸ ಯೋಜನೆ ಮತ್ತು ಪ್ರಧಾನಮಂತ್ರಿ ಕೌಶಲ್ಯ ವಿಕಾಸ ಯೋಜನೆಯಲ್ಲಿ ತರಬೇತಿ ನೀಡಿ ತರಬೇತಿ ಪಡೆದಂತಹ ಶೇ.70 ರಷ್ಟು ಜನರಿಗೆ ಉದ್ಯೋಗವನ್ನು ಕಲ್ಪಿಸಲಾಗುತ್ತದೆ.<br><br>**ಸ್ಟಡಿ ಸರ್ಕಲ್ಸ್**:– ಎಲ್ಲಾ ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಉದ್ಯೋಗಾಕಾಂಕ್ಷಿಗಳು ವಿವಿಧ ನೇಮಕಾತಿ ಪರೀಕ್ಷೆಗಳನ್ನು ವಿಶ್ವಾಸದಿಂದ ಎದುರಿಸುವಂತಾಗಲು **'ಸ್ಟಡಿ ಸರ್ಕಲ್ಸ್'** ಕಾರ್ಯಕ್ರಮದಡಿ ಉಚಿತ ನೇಮಕಾತಿ ಪರೀಕ್ಷಾ ಪೂರ್ವ ತರಬೇತಿಗಳನ್ನು ಆಯೋಜಿಸುತ್ತಿವೆ.<br><br>Koushalkar.com ವೆಬ್ ಪೋರ್ಟಲ್‌ನಲ್ಲಿ ನೊಂದಾಯಿಸಿಕೊಂಡಿರುವ ಅಭ್ಯರ್ಥಿಗಳಿಗೆ ತರಬೇತಿ ನೀಡಿ ಶೇ.70 ರಷ್ಟು ಅಭ್ಯರ್ಥಿಗಳಿಗೆ ಉದ್ಯೋಗ ದೊರಕಿಸಲು ಕ್ರಮ ವಹಿಸಲಾಗಿದೆ.<br><br>ರಾಜ್ಯದಲ್ಲಿ ಮಿನಿ ಉದ್ಯೋಗ ಮೇಳವನ್ನು ಉದ್ಯೋಗ ವಿಭಾಗದಿಂದ ಮತ್ತು ಬೃಹತ್ ಉದ್ಯೋಗ ಮೇಳಗಳನ್ನು ಜಿಲ್ಲಾ ಮಟ್ಟ, ವಿಭಾಗೀಯ ಮಟ್ಟ ಮತ್ತು ರಾಜ್ಯ ಮಟ್ಟದಲ್ಲಿ ಆಯೋಜಿಸಿ ಅರ್ಹ ಅಭ್ಯರ್ಥಿಗಳಿಗೆ ಉದ್ಯೋಗ ದೊರಕಿಸಿಕೊಡಲು ಕ್ರಮವಹಿಸಲಾಗಿದೆ.<br><br>ಡೇ–ನಲ್ಮ್ ಅಭಿಯಾನದ ಕೌಶಲ್ಯ ತರಬೇತಿ ಮೂಲಕ ಉದ್ಯೋಗ ಮತ್ತು ಸ್ಥಳ ನಿಯುಕ್ತಿ ಉಪ ಘಟಕದಡಿ ನಗರದ ನಿರುದ್ಯೋಗಿ ಯುವಕ ಯುವತಿಯರಿಗೆ ತರಬೇತಿ ಪೂರ್ಣಗೊಂಡವರಿಗೆ ಶೇ.70 ರಷ್ಟು ಅಭ್ಯರ್ಥಿಗಳಿಗೆ ವೇತನಾಧರಿತ ಅಥವಾ ಸ್ವಯಂ–ಉದ್ಯೋಗಾವಕಾಶವನ್ನು ಕಲ್ಪಿಸಲಾಗುತ್ತಿದೆ.<br><br>ವೈಯಕ್ತಿಕ ಕಿರು ಉದ್ದಿಮೆಯನ್ನು ಪ್ರಾರಂಭಿಸಲು ಇಚ್ಚಿಸಿದಲ್ಲಿ ರೂ.2.00 ಲಕ್ಷದವರೆಗೆ ಬ್ಯಾಂಕಿನ ಸಾಲ ಸೌಲಭ್ಯವನ್ನು ಕಲ್ಪಿಸಲಾಗುವುದು ಹಾಗೂ ಬ್ಯಾಂಕಿನಿಂದ ಸಾಲ ಮಂಜೂರಾದ ಮೊತ್ತಕ್ಕೆ ಅನುಗುಣವಾಗಿ ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಡಿ ಭರಿಸಲಾಗುವುದು. |

<table>
<tr><td></td><td></td><td>ಗುಂಪು ಕಿರು ಉದ್ದಿಮೆಯನ್ನು ಪ್ರಾರಂಭಿಸಲು ಇಚ್ಛಿಸಿದಲ್ಲಿ ರೂ.10.00 ಲಕ್ಷದವರೆಗೆ ಬ್ಯಾಂಕಿನಿಂದ ಸಾಲ ಸೌಲಭ್ಯವನ್ನು ಕಲ್ಪಿಸಲಾಗುವುದು ಹಾಗೂ ಬ್ಯಾಂಕಿನಿಂದ ಸಾಲ ಮಂಜೂರಾದ ಮೊತ್ತಕ್ಕೆ ಅನುಗುಣವಾಗಿ ಶೇ.7 ಕ್ಕಿಂತ ಮೇಲ್ಪಟ್ಟ ಬಡ್ಡಿ ಸಹಾಯಧನವನ್ನು ಯೋಜನೆಯಡಿ ಭರಿಸಲಾಗುವುದು.<br><br>ಸಂಜೀವಿನಿ–ಕೆಎಸ್‌ಆರ್‌ಎಲ್‌ಪಿಎಸ್ ರಲ್ಲಿ ದೀನ್‌ದಯಾಳ್ ಗ್ರಾಮೀಣ ಕೌಶಲ್ಯ ಯೋಜನೆಯು ಗ್ರಾಮೀಣ ಬಡ ಯುವ ಜನತೆಗೆ ಕೌಶಲ್ಯಾಭಿವೃದ್ಧಿ ತರಬೇತಿ ನೀಡಿ ಉದ್ಯೋಗ ಕಲ್ಪಿಸುವ ಕೇಂದ್ರ ಪುರಸ್ಕೃತ ಯೋಜನೆಯಾಗಿರುತ್ತದೆ. ಈ ಯೋಜನೆಯು 18 ರಿಂದ 35 ವರ್ಷದೊಳಗಿನ ಬಡತನ ರೇಖೆಯಲ್ಲಿ ಬರುವ ಯುವಕ ಯುವತಿಯರಿಗೆ ನೀಡಲಾಗುತ್ತದೆ. ಸದರಿ ಯೋಜನೆಯಡಿ 500 ಕ್ಕೂ ಹೆಚ್ಚು ವೃತ್ತಿ ಕೌಶಲ್ಯಗಳಲ್ಲಿ ಕೌಶಲ್ಯ ತರಬೇತಿಯನ್ನು ನೀಡಲಾಗುತ್ತಿದೆ. ಸದರಿ ತರಬೇತಿಯಲ್ಲಿ ಆಂಗ್ಲ ಭಾಷೆ ಬಳಕೆ, ಬೇಸಿಕ್ ಕಂಪ್ಯೂಟರ್ ಮತ್ತು ಕೌಶಲ್ಯಗಳಿಂದ ಉದ್ಯೋಗಾರ್ಹತೆ ಗಳಿಸಲು ಅಡಿಪಾಯ ರೂಪಿಸಲಾಗುತ್ತಿದೆ.<br><br>ಗ್ರಾಮೀಣ ಸ್ವ ಉದ್ಯೋಗ ತರಬೇತಿ ಯೋಜನೆಯಡಿ 18 ರಿಂದ 45 ವರ್ಷದ ಗ್ರಾಮೀಣ ನಿರುದ್ಯೋಗ ವಿದ್ಯಾವಂತ ಯುವಕ ಯುವತಿಯರಿಗೆ ಸ್ವಯಂ ಉದ್ಯೋಗ ಪ್ರಾರಂಭಿಸಲು ತರಬೇತಿಯನ್ನು 10 ರಿಂದ 45 ದಿನಗಳವರೆಗೆ ನೀಡಲಾಗುತ್ತದೆ ಮತ್ತು ಅವರ ಜೀವನೋಪಾಯಕ್ಕೆ ಸಹಕಾರಿಯಾಗುತ್ತಿದೆ.<br><br>ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಕೇಂದ್ರ ಸರ್ಕಾರ, ನವದೆಹಲಿ ರವರ ಪರಿಮಿತಿಯಲ್ಲಿ ಬರುತ್ತದೆ ಹಾಗೂ ಪೂರ್ಣ ವೆಚ್ಚವನ್ನು ಭರಿಸಲಾಗುತ್ತದೆ. ಒಟ್ಟು ರಾಜ್ಯದಲ್ಲಿ 33 ಕೇಂದ್ರಗಳನ್ನು ಸ್ಥಾಪಿಸಲಾಗಿದೆ ಮತ್ತು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿವೆ.</td></tr>
<tr><td>ಆ)</td><td>ಕಳೆದ ಮೂರು ವರ್ಷದಿಂದ ಎಷ್ಟು ಜನರಿಗೆ ಉದ್ಯೋಗವನ್ನು ನೀಡಲಾಗಿದೆ;</td><td>ಕಳೆದ ಮೂರು ವರ್ಷಗಳಲ್ಲಿ 98,314 ಜನರಿಗೆ ಉದ್ಯೋಗಾವಕಾಶವನ್ನು ಕಲ್ಪಿಸಲಾಗಿದೆ.</td></tr>
<tr><td>ಇ)</td><td>ಇಲಾಖೆಗೆ ಮಂಜೂರಾಗಿರುವ ಹುದ್ದೆಗಳು ಎಷ್ಟು ಇಲಾಖೆ ಪ್ರಾರಂಭದಿಂದ ಇಂದಿನವರೆಗೆ ವೇತನ, ಬಾಡಿಗೆ, ಭತ್ಯೆ ಮುಂತಾದವುಗಳು ಎಲ್ಲವೂ ಸೇರಿದಂತೆ ಒಟ್ಟಾರೆ ತಗುಲಿರುವ ಖರ್ಚು ಎಷ್ಟು;</td><td><u>ಇಲಾಖೆಗೆ ಮಂಜೂರಾಗಿರುವ ಹುದ್ದೆಗಳ ವಿವರ ಈ ಕೆಳಗಿನಂತಿದೆ:–</u>
<table>
<tr><th>ಕ್ರ ಸಂ</th><th>ಇಲಾಖೆಯ ಹೆಸರು</th><th>ಮಂಜೂರಾಗಿರುವ ಹುದ್ದೆಗಳು</th></tr>
<tr><td>1</td><td>ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆ</td><td>6470</td></tr>
<tr><td>2</td><td>ಕೌಶಲ್ಯ ಮಿಷನ್</td><td>342</td></tr>
<tr><td>3</td><td>ಸಿಡಾಕ್</td><td>46</td></tr>
<tr><td>4</td><td>ಜಿ.ಟಿ.ಟಿ.ಸಿ</td><td>617</td></tr>
<tr><td>5</td><td>ಎನ್.ಯು.ಎಲ್.ಎಂ</td><td>07</td></tr>
<tr><td>6</td><td>ಎನ್.ಆರ್.ಎಲ್.ಎಂ</td><td>12</td></tr>
</table></td></tr>
</table>

| | | ಇಲಾಖೆ ಪ್ರಾರಂಭದಿಂದ ಇಂದಿನವರೆಗೆ ವೇತನ, ಬಾಡಿಗೆ, ಭತ್ಯೆ ಮುಂತಾದವುಗಳು ಎಲ್ಲವೂ ಸೇರಿದಂತೆ ಒಟ್ಟಾರೆ ತಗುಲಿರುವ ಖರ್ಚಿನ ವಿವರ ಈ ಕೆಳಕಂಡಂತಿದೆ:- |
|---|---|---|

(ರೂ.ಲಕ್ಷಗಳಲ್ಲಿ)

| ಕ್ರ ಸಂ | ಇಲಾಖೆಯ ಹೆಸರು | 2017-18 | 2018-19 | 2019-20 (ಜನವರಿ 2020 ರ ಅಂತ್ಯಕ್ಕೆ) |
|---|---|---|---|---|
| 1 | ಕೈಗಾರಿಕಾ ತರಬೇತಿ ಮತ್ತು ಉದ್ಯೋಗ ಇಲಾಖೆ | 42785.23 | 37469.46 | 30877.46 |
| 2 | ಕೌಶಲ್ಯ ಮಿಷನ್ | 7127.44 | 4895.70 | 7318.42 |
| 3 | ಸಿಡಾಕ್ | 561.69 | 899.00 | 796.02 |
| 4 | ಜಿ.ಟಿ.ಟಿ.ಸಿ | 12798.25 | 8962.29 | 12116.42 |
| 5 | ಎನ್.ಯು.ಎಲ್.ಎಂ | 3419.36 | 5162.78 | 2997.24 |
| 6 | ಎನ್.ಆರ್.ಎಲ್.ಎಂ | 20440.00 | 14738.00 | 24335.00 |

| | | |
|---|---|---|
| ಈ) | ಈ ಇಲಾಖೆ ಪ್ರಾರಂಭವಾದಾಗಿನಿಂದ ನಿರೀಕ್ಷಿತ ಗುರಿಯನ್ನು ತಲುಪಲಾಗಿದೆಯೇ; | ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆಯನ್ನು 24.09.2016 ರಂದು ನೂತನವಾಗಿ ಸೃಜಿಸಿದ್ದು, ಉತ್ತಮ ಪ್ರಗತಿಯ ಗುರಿಯನ್ನು ಸಾಧಿಸಲು ಕ್ರಮವಹಿಸಲಾಗುತ್ತಿದೆ. |
| ಉ) | ಅಪಾರ ಪ್ರಮಾಣದಲ್ಲಿ ನಿರುದ್ಯೋಗ ಹೆಚ್ಚುತ್ತಿದ್ದು, ಅದರ ಪರಿಹಾರಕ್ಕೆ ಸರ್ಕಾರ ಕಂಡುಕೊಂಡಿರುವ ಮಾರ್ಗಗಳೇನು; ಉದ್ಯೋಗ ಸೃಷ್ಟಿಗೆ ಸರ್ಕಾರದ ಮುಂದಿರುವ ಯೋಜನೆಗಳೇನು? (ವಿವರ ನೀಡುವುದು) | ರಾಜ್ಯದಲ್ಲಿ ಮುಖ್ಯಮಂತ್ರಿಗಳ ಕೌಶಲ್ಯ ಕರ್ನಾಟಕ ಯೋಜನೆ ಹಾಗೂ ಪ್ರಧಾನ ಮಂತ್ರಿ ಕೌಶಲ್ಯ ವಿಕಾಸ ಯೋಜನೆಯನ್ನು ಪ್ರಾರಂಭಿಸಿದ್ದು, ಸರ್ಕಾರದ ಸಂಸ್ಥೆಗಳಿಂದ ಹಾಗೂ ಖಾಸಗಿ ವೃತ್ತಿ ತರಬೇತಿ ಕೇಂದ್ರಗಳಿಂದ ತರಬೇತಿಗಳನ್ನು ನೀಡಿ ಶೇ.70 ರಷ್ಟು ಅಭ್ಯರ್ಥಿಗಳಿಗೆ ಉದ್ಯೋಗಾವಕಾಶವನ್ನು ಕಲ್ಪಿಸಲಾಗುತ್ತಿದೆ ಹಾಗೂ ಕೈಗಾರಿಕೆ ಉದ್ಯಮಿಗಳನ್ನು ಆಹ್ವಾನಿಸಿ ಉದ್ಯೋಗ ಮೇಳಗಳನ್ನು ನಡೆಸಿ ಉದ್ಯೋಗಾವಕಾಶವನ್ನು ಕಲ್ಪಿಸಲಾಗುತ್ತಿದೆ. ವೈಯಕ್ತಿಕ ಉದ್ದಿಮೆಗಳನ್ನು ಪ್ರಾರಂಭಿಸಲು ಸಾಲವನ್ನು ಬ್ಯಾಂಕ್ ಮೂಲಕ ನೀಡಿ ಸಹಾಯಾನುದಾನವನ್ನು ಭರಿಸಲಾಗುತ್ತಿದೆ.<br><br>ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಸ್ಟಡಿ ಸರ್ಕಲ್ ಮೂಲಕ ಉಚಿತ ಪರೀಕ್ಷಾಪೂರ್ವ ತರಬೇತಿ ಮತ್ತು ಉದ್ಯೋಗ ಮೇಳಗಳನ್ನು ಆಯೋಜಿಸಲು ಅಗತ್ಯ ಮೂಲಭೂತ ಸೌಲಭ್ಯ ಒದಗಿಸಿದ್ದು ಪೂರಕವಾಗಿ YES (ಎಸ್) ಕಾರ್ಯಕ್ರಮ ಮೂಲಕ ಸೂಕ್ತ ಕಾರ್ಯಾಗಾರ/ತರಬೇತಿ ನೀಡುವ ಮೂಲಕ ಉದ್ಯೋಗ ವಿನಿಮಯ ಕಚೇರಿಗಳನ್ನು ಉದ್ಯೋಗಾಕಾಂಕ್ಷಿ ಮತ್ತು ನಿಯೋಜಕರ ಸ್ನೇಹಿಯಾಗಿ ಮಾರ್ಪಡಿಸಲಾಗಿದೆ. |

**ಸಂಖ್ಯೆ: ಕೌಉಜೀಇ 09 ಕೈತಪ್ರ 2020**

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ:ಆಕುಕ 07 ಹೆಚ್ಎಸ್ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ:11-03-2020

113
O/S
12/3/20

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು-560 001.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ~~ಪರಿಷತ್ತು~~ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಮಂಜುನಾಥ್ ಎ (ಮಾಗಡಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1672ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಅ.ಸ ಪತ್ರ ಸಂಖ್ಯೆ:ವಿಸಪ್ರ.ಶಾ/15ನೇವಿಸ/6ಅ/ಚುಗು-ಚುರ.ಪ್ರಶ್ನೆ/06/2020, ದಿನಾಂಕ:03.03.2020

******

ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮಂಜುನಾಥ ಎ (ಮಾಗಡಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1672ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿರುತ್ತೇನೆ.

ತಮ್ಮ ನಂಬುಗೆಯ,

(ಯ. ಶಿವಶಂಕರ್) 11/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1672 |
| ಮಾನ್ಯ ಸದಸ್ಯರ ಹೆಸರು | ಶ್ರೀ.ಮಂಜುನಾಥ್.ಎ. (ಮಾಗಡಿ) |
| ಉತ್ತರಿಸಬೇಕಾದ ದಿನಾಂಕ | 12-03-2020 |
| ಉತ್ತರಿಸುವ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮಾಗಡಿ ವಿಧಾನಸಭಾ ಕ್ಷೇತ್ರದ ಸಾರ್ವಜನಿಕ ಆಸ್ಪತ್ರೆಯಲ್ಲಿ ಹಲವಾರು ವರ್ಷಗಳಿಂದ ವೈದ್ಯರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ವೈದ್ಯರ ಕೊರತೆಯಿಂದಾಗಿ ಬಡ ರೋಗಿಗಳ ಚಿಕಿತ್ಸೆ ಪಡೆಯಲು ಕಷ್ಟಸಾಧ್ಯವಾಗಿದ್ದು ತುರ್ತು ಚಿಕಿತ್ಸೆಗಾಗಿ ಬೆಂಗಳೂರಿನ ಪ್ರತಿಷ್ಠಿತ ಆಸ್ಪತ್ರೆಗಳಿಗೆ ತೆರಳಿ ಚಿಕಿತ್ಸೆ ಪಡೆಯಬೇಕಾದ ಅನಿವಾರ್ಯ ಪರಿಸ್ಥಿತಿ ನಿರ್ಮಾಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿಲ್ಲ.<br>ಮಾಗಡಿ ಸಾರ್ವಜನಿಕ ಆಸ್ಪತ್ರೆಗೆ ಒಟ್ಟು 12 ತಜ್ಞ ವೈದ್ಯರ ಹುದ್ದೆಗಳು ಮಂಜೂರಾಗಿದ್ದು, 11 ತಜ್ಞ ವೈದ್ಯರು ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಪೈಕಿ 2 ಪ್ರಸೂತಿ ತಜ್ಞರ ಹುದ್ದೆಯು ಮಂಜೂರಾಗಿದ್ದು, 01 ಹುದ್ದೆ ಖಾಲಿ ಇರುತ್ತದೆ. ಸಾರ್ವಜನಿಕರಿಗೆ ಆರೋಗ್ಯ ಸೇವೆ ಒದಗಿಸುವಲ್ಲಿ ತೊಂದರೆಯಾಗದಂತೆ ಲಭ್ಯವಿರುವ ತಜ್ಞವೈದ್ಯರ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದೆ. |
| ಇ | ಹಾಗಿದ್ದಲ್ಲಿ, ಖಾಲಿ ಇರುವ ವೈದ್ಯ ಹುದ್ದೆಗಳನ್ನು ಎಷ್ಟು ಕಾಲಾವಧಿಯಲ್ಲಿ ಭರ್ತಿ ಮಾಡಲಾಗುವುದು; | ಖಾಲಿ ಇರುವ ತಜ್ಞರು/ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿಯಿಂದ ವಿಶೇಷ ನಿಯಮಗಳ ಮೂಲಕ ಭರ್ತಿ ಮಾಡಲು ದಿನಾಂಕ:06.02.2020ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ನಿಯಮಗಳನ್ನು ಪ್ರಕಟಿಸಿದ್ದು, ಅಂತಿಮ ನಿಯಮಗಳನ್ನು ಪ್ರಕಟಿಸುವ ಪ್ರಕ್ರಿಯೇ ಚಾಲ್ತಿಯಲ್ಲಿದ್ದು, ಶೀಘ್ರದಲ್ಲಿಯೇ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗುವುದು. |
| ಈ | ಇದುವರೆಗೂ ಖಾಲಿ ಇರುವ ವೈದ್ಯ ಹುದ್ದೆಗಳನ್ನು ಭರ್ತಿ ಮಾಡದೆ ಇರುವುದಕ್ಕೆ ಕಾರಣಗಳೇನು? (ವಿವರ ನೀಡುವುದು) | ಖಾಲಿ ಇರುವ 01 ಪ್ರಸೂತಿ ತಜ್ಞರ ಹುದ್ದೆಯನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿಮಾಡಲು ದಿನಾಂಕ:31.10.2019 ರಂದು ಪತ್ರಿಕಾ ಪ್ರಕಟಣೆ ನೀಡಲಾಗಿದ್ದು ದಿನಾಂಕ:11.11.2019 ರಂದು ನಡೆದ ಸಂದರ್ಶನದಲ್ಲಿ ಯಾವುದೇ ತಜ್ಞವೈದ್ಯರು ಹಾಜರಾಗಿರುವುದಿಲ್ಲ. ಈ ಪತ್ರಿಕಾ ಪ್ರಕಟಣೆ ಜಾಹಿರಾತು ಕೂಡ ಒಂದು ವರ್ಷದವರೆಗೆ ಚಾಲ್ತಿಯಲ್ಲಿರುತ್ತದೆ. ಅಭ್ಯರ್ಥಿಯು ಲಭ್ಯವಾದಲ್ಲಿ ಗುತ್ತಿಗೆ ಆಧಾರದ ಮೇಲೆ ತುರ್ತಾಗಿ ನೇಮಕ ಮಾಡಿಕೊಳ್ಳಲಾಗುವುದು. |

ಸಂ:ಆಕುಕ 07 ಹೆಚ್ ಎಸ್ ಡಿ 2020

[ಬಿ. ಶ್ರೀರಾಮುಲು]
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ:ಆಕುಕ 08 ಹೆಚ್ಎಸ್‌ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ:11-03-2020

123
4/S
12/3/20

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು-560 001.

ಇವರಿಗೆ:

ಕಾರ್ಯದರ್ಶಿಗಳು, ಸಭೆ
ಕರ್ನಾಟಕ ವಿಧಾನ ~~ಪರಿಷತ್ತು~~,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಮುನಿಯಪ್ಪ ವಿ (ಶಿಡ್ಲಘಟ್ಟ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1553ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಅ.ಸ ಪತ್ರ ಸಂಖ್ಯೆ:ವಿಸಪ್ರ.ಶಾ/15ನೇವಿಸ/6ರಾ/ಚುಗು-ಚುರ.ಪ್ರಶ್ನೆ/06/2020, ದಿನಾಂಕ:03.03.2020

******

ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಮುನಿಯಪ್ಪ ವಿ (ಶಿಡ್ಲಘಟ್ಟ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1553ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿರುತ್ತೇನೆ.

ತಮ್ಮ ನಂಬುಗೆಯ,

(ಯ. ಶಿವಶಂಕರ್) 11/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

# ಕರ್ನಾಟಕ ವಿಧಾನ ಸಭೆ.

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1553 |
| ಸದಸ್ಯರ ಹೆಸರು: | ಶ್ರೀ ಮುನಿಯಪ್ಪ ವಿ.(ಶಿಡ್ಲಘಟ್ಟ) |
| ಉತ್ತರಿಸಬೇಕಾದ ದಿನಾಂಕ: | 12-03-2020 |
| ಉತ್ತರಿಸಬೇಕಾದ ಸಚಿವರು: | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಸಾರ್ವಜನಿಕ ಆಸ್ಪತ್ರೆ ಮತ್ತು ಕ್ಷೇತ್ರದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ವೈದ್ಯರು ಮತ್ತು ಸಿಬ್ಬಂದಿ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ವೈದ್ಯರ ಮತ್ತು ಸಿಬ್ಬಂದಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಬಂದಿದೆ.<br><br>ವೈದ್ಯರ ಮತ್ತು ಸಿಬ್ಬಂದಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| (ಆ) | ಸದರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮೂಲಭೂತ ಸೌಕರ್ಯಗಳು ಇಲ್ಲದೇ ರೋಗಿಗಳಿಗೆ ಹಾಗೂ ಸಾರ್ವಜನಿಕವಾಗಿ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಇ) | ಹಾಗಿದ್ದಲ್ಲಿ, ಸಾರ್ವಜನಿಕ ಆಸ್ಪತ್ರೆ ಮತ್ತು ಕ್ಷೇತ್ರದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಮೂಲಭೂತ ಸೌಕರ್ಯಗಳಿಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು;(ವಿವರ ಒದಗಿಸುವುದು) | ಮೂಲಭೂತ ಸೌಕರ್ಯಗಳನ್ನು ಅನುದಾನದ ಲಭ್ಯತೆಗನುಗುಣವಾಗಿ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮ ಕೈಗೊಳ್ಳಲಾಗುವುದು. |
| ಈ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದಲ್ಲಿ ಮಾನಸಿಕ ರೋಗಿಗಳಿಗೆ ಮಾತ್ರೆ ಮತ್ತು ಔಷಧಿಗಳು ಕಡಿಮೆ ಸರಬರಾಜು ಆಗುತ್ತಿದ್ದು, ರೋಗಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೇಯೇ: ಹಾಗಿದ್ದಲ್ಲಿ ಮಾನಸಿಕ ರೋಗಿಗಳಿಗೆ ಮಾತ್ರೆ ಮತ್ತು ಔಷಧಿಗಳನ್ನು ಹೆಚ್ಚಿಗೆ ಒದಗಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು? (ವಿವರ ನೀಡುವುದು) | ರಾಷ್ಟ್ರೀಯ ಮಾನಸಿಕ ಆರೋಗ್ಯದ ಕಾರ್ಯಕ್ರಮದಡಿಯಲ್ಲಿ, ಕೆ.ಎಸ್.ಡಿ.ಎಲ್.ಡಬ್ಲ್ಯೂ.ಎಸ್. ಸಂಸ್ಥೆ ಬೆಂಗಳೂರು. ಅಧೀನದಲ್ಲಿರುವ ಜಿಲ್ಲಾ ಔಷಧ ಉಗ್ರಾಣಗಳಿಂದ ಔಷಧಿಗಳು ವಾರ್ಷಿಕ ಬೇಡಿಕೆ ಪಟ್ಟಿಯಂತೆ ಸರಬರಾಜು ಮಾಡಲಾಗುತ್ತಿದೆ.<br><br>ಮಾನಸಿಕ ರೋಗಿಗಳಿಗೆ ತೊಂದರೆಯಾಗದಂತೆ ಮಾನಸಿಕ ಆರೋಗ್ಯಕ್ಕೆ ಸಂಬಂಧಿಸಿದ ಔಷಧಿಗಳು ಹೆಚ್ಚಿಗೆ ಒದಗಿಸಲು **NFDF (National Free Drugs Fund)** ವತಿಯಿಂದ ಸ್ಥಳೀಯವಾಗಿ ಖರೀದಿಸಿ ನಿಯಾಮಾನುಸಾರ ಭರಿಸಲು ಸೂಚಿಸಲಾಗಿದೆ. |

ಸಂ:ಆಕುಕ 08 ಹೆಚ್ ಎಸ್ ಡಿ 2020

[ಬಿ. ಶ್ರೀರಾಮುಲು]
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ:ಆಕುಕ 10 ಹೆಚ್ಎಸ್‌ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ:11-03-2020

13
4/5
12/3/20

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು-560 001.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ~~ಪರಿಷತ್ತು~~ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಡಾ. ಅಜಯ್ ಧರ್ಮ ಸಿಂಗ್ (ಜೇವರ್ಗಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1540ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಅ.ಸ ಪತ್ರ ಸಂಖ್ಯೆ:ವಿಸಪ್ರ.ಶಾ/15ನೇವಿಸ/6ರಾ/ಚುಗು-ಚುರ.ಪ್ರಶ್ನೆ/06/2020, ದಿನಾಂಕ:03.03.2020.

******

ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಡಾ. ಅಜಯ್ ಧರ್ಮ ಸಿಂಗ್ (ಜೇವರ್ಗಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1540ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿರುತ್ತೇನೆ.

ತಮ್ಮ ನಂಬುಗೆಯ,

(ಯ. ಶಿವಶಂಕರ್) 11/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

# ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1540 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ.ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | 12-03-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಜಿಲ್ಲೆಯ ಯಡ್ರಾಮಿ ಪಟ್ಟಣದ ಸಾರ್ವಜನಿಕ ಆಸ್ಪತ್ರೆಯಲ್ಲಿ ವೈದ್ಯಾಧಿಕಾರಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ; ಎಷ್ಟು ವೈದ್ಯಾಧಿಕಾರಿಗಳ ಕೊರತೆ ಇದೆ.(ಸಂಪೂರ್ಣ ವಿವರ ನೀಡುವುದು) | ಕಲಬುರಗಿ ಜಿಲ್ಲೆ,ಜೇವರ್ಗಿ ತಾ: ಯಡ್ರಾಮಿ ಸಮುದಾಯ ಆರೋಗ್ಯ ಕೇಂದ್ರದಲ್ಲಿನ ವೈದ್ಯರ ಹುದ್ದೆಗಳ ವಿವರ ಈ ಕೆಳಗಿನಂತಿದೆ:- |

| ಕ್ರಸಂ | ಹುದ್ದೆಯ ಹೆಸರು | ಮಂಜೂರು | ಕಾರ್ಯನಿರತ | ಖಾಲಿ |
|---|---|---|---|---|
| 1 | ಹಿರಿಯ ವೈದ್ಯರು | 1 | 1 | 0 |
| 2 | ದಂತ ವೈದ್ಯರು | 1 | 1 | 0 |
| 3 | ಸ್ತ್ರೀರೋಗ ತಜ್ಞರು | 1 | 0 | 1 |
| 4 | ಮಕ್ಕಳ ತಜ್ಞರು | 1 | 0 | 1 |
| 5 | ಅರವಳಿಕೆ ತಜ್ಞರು | 1 | 0 | 1 |

| ಇ | ಹಾಗಿದ್ದಲ್ಲಿ, ವೈದ್ಯಾಧಿಕಾರಿಗಳ ಹುದ್ದೆಯನ್ನು ಭರ್ತಿ ಮಾಡುವುದು ಯಾವಾಗ? | 1. ತಜ್ಞ ವೈದ್ಯರನ್ನು "On Call Basis" ಮೇಲೆ ತೆಗೆದುಕೊಳ್ಳಲು ಸರ್ಕಾರದ ಆದೇಶ ಸಂಖ್ಯೆಆಕುಕ 178 ಹೆಚ್‌ಎಸ್‌ಹೆಚ್ 2011, ದಿನಾಂಕ: 20-05-2016ರಲ್ಲಿ ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.<br><br>2. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಸರ್ಕಾರಿ ಆದೇಶ ಸಂಖ್ಯೆ: ಆಕುಕ 297 ಹೆಚ್‌ಎಸ್‌ಹೆಚ್ 2015, ದಿನಾಂಕ:22-04-2016 ಹಾಗೂ ಆಕುಕ 359 ಹೆಚ್‌ಎಸ್‌ಹೆಚ್ 2016, ದಿನಾಂಕ:01-08-2016ರಲ್ಲಿ ಅನುಮತಿ ನೀಡಲಾಗಿದೆ.<br><br>3. ಎಂಬಿಬಿಎಸ್ ಪದವಿ ಹೊಂದಿದ ವೈದ್ಯ ಅಭ್ಯರ್ಥಿಗಳು ಲಭ್ಯವಿಲ್ಲದೆ ಇದ್ದ ಪಕ್ಷದಲ್ಲಿ ಸದರಿ ಹುದ್ದೆಯ ಎದುರು ಗುತ್ತಿಗೆ ಆಯುಷ್ ವೈದ್ಯರನ್ನು ಆಯಾ ಜಿಲ್ಲಾ ಆರೋಗ್ಯ & ಕುಟುಂಬ ಕಲ್ಯಾಣಾಧಿಕಾರಿಗಳು ಜಿಲ್ಲಾಧಿಕಾರಿಗಳ ಸಹಮತಿ ಪಡೆದು ನೇಮಕ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.<br><br>4. ಹಾಗೆಯೇ ಖಾಲಿ ಇರುವ ತಜ್ಞರು/ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹಾಗೂ ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ವಿಶೇಷ ನೇರ ನೇಮಕಾತಿ ನಿಯಮ-2019ರ ಮೂಲಕ ಭರ್ತಿ ಮಾಡಲು ದಿನಾಂಕ: 06-02-2020ರ ಕರ್ನಾಟಕ ರಾಜ್ಯ ಪತ್ರದಲ್ಲಿ ಕರಡು ನಿಯಮಗಳನ್ನು ಹೊರಡಿಸಿದ್ದು, ಅಂತಿಮ ಅಧಿಸೂಚನೆ ಹೊರಡಿಸುವ ಪ್ರಕ್ರಿಯೆ ಚಾಲ್ತಿಯಲಿದೆ. |
|---|---|---|

ಸಂ:ಆಕುಕ 10 ಹೆಚ್ ಎಸ್ ಡಿ 2020

[ಬಿ. ಶ್ರೀರಾಮುಲು]
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ:ಆಕುಕ 11 ಹೆಚ್‌ಎಸ್‌ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ:11-03-2020

151
415
12/3/20

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು-560 001.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಪರಿಷತ್ತು ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ:- ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರವಿ ಸುಬ್ರಹ್ಮಣ್ಯ ಎಲ್ ಎ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:671ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಅ.ಸ ಪತ್ರ ಸಂಖ್ಯೆ:ವಿಸಪ್ರ.ಶಾ/15ನೇವಿಸ/6ರಾ/ಚುಗು-ಚುರ.ಪ್ರಶ್ನೆ/06/2020, ದಿನಾಂಕ:03.03.2020

******

ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ರವಿ ಸುಬ್ರಹ್ಮಣ್ಯ ಎಲ್ ಎ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:671ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿರುತ್ತೇನೆ.

ತಮ್ಮ ನಂಬುಗೆಯ,

(ಯ. ಶಿವಶಂಕರ್) 11/3/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

<u>ಕರ್ನಾಟಕ ವಿಧಾನ ಸಭೆ</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 671 |
| ಮಾನ್ಯ ಸದಸ್ಯರ ಹೆಸರು: | ಶ್ರೀ ರವಿಸುಬ್ರಹ್ಮಣ್ಯ ಎಲ್.ಎ, (ಬಸವನಗುಡಿ) |
| ಉತ್ತರಿಸಬೇಕಾದ ದಿನಾಂಕ: | 12-03-2020 |
| ಉತ್ತರಿಸುವ ಸಚಿವರು: | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ದಿನಾಂಕ:01.04.2006ರ ಮೊದಲು ಆರೋಗ್ಯ ಇಲಾಖೆಯಲ್ಲಿ ಗುತ್ತಿಗೆ ಆಧಾರದಿಂದ ಖಾಯಂಗೊಂಡಿರುವ ವೈದ್ಯಾಧಿಕಾರಿಗಳ ಗುತ್ತಿಗೆ ಸೇವೆಯನ್ನು ಸಂಬಳ ಮತ್ತು ಪಿಂಚಣಿಗೆ ಪರಿಗಣಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ;</td><td>ಇಲ್ಲ</td></tr>
<tr><td>ಆ</td><td>ಹಾಗಿದ್ದಲ್ಲಿ; ಗುತ್ತಿಗೆ ಸೇವೆಯನ್ನು ಸಂಬಳ ಮತ್ತು ಪಿಂಚಣಿಗೆ ಪರಿಗಣಿಸುವ ಆದೇಶ ಯಾವ ದಿನಾಂಕದಿಂದ ಜಾರಿಗೆ ತರಲಾಗುವುದು;</td><td>ಕೆ.ಸಿ.ಎಸ್.ನಿಯಮಗಳನ್ವಯ ಅವಕಾಶ ಇರುವುದಿಲ್ಲ.</td></tr>
<tr><td>ಇ</td><td>ರಾಜ್ಯದಲ್ಲಿ ಆರೋಗ್ಯ ಇಲಾಖೆಯಲ್ಲಿ ಗುತ್ತಿಗೆ ಆಧಾರದದಿಂದ ಖಾಯಂಗೊಂಡಿರುವ ವೈದ್ಯಾಧಿಕಾರಿಗಳ ಸಂಖ್ಯೆ ಎಷ್ಟು (ಸಂಪೂರ್ಣ ವರ್ಷವಾರು ವಿವರ ನೀಡುವುದು)?</td><td>
<table>
<tr><th>ವರ್ಷವಾರು ದಿನಾಂಕ.</th><th>ಖಾಯಂಗೊಂಡ ವೈದ್ಯರುಗಳ ಸಂಖ್ಯೆ.</th></tr>
<tr><td>ದಿ:21.01.1997</td><td>180</td></tr>
<tr><td>ದಿ:07.12.1999</td><td>137</td></tr>
<tr><td>ದಿ:25.06.2003</td><td>331</td></tr>
<tr><td>ದಿ:17.03.2006</td><td>325 ವೈದ್ಯಾಧಿಕಾರಿಗಳು ಮತ್ತು 26 ದಂತ ವೈದ್ಯಾಧಿಕಾರಿಗಳು.</td></tr>
</table>
</td></tr>
</table>

<u>ಸಂ:ಆಕುಕ 11 ಹೆಚ್ ಎಸ್ ಡಿ 2020</u>

[ಬಿ. ಶ್ರೀರಾಮುಲು]

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ

ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ:ಆಕುಕ 17 ಹೆಚ್ಎಸ್‌ಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ
ಬೆಂಗಳೂರು, ದಿನಾಂಕ:11-03-2020

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸಸೌಧ, ಬೆಂಗಳೂರು-560 001.

ಇವರಿಗೆ:

ಕಾರ್ಯದರ್ಶಿಗಳು, ಸಭೆ
ಕರ್ನಾಟಕ ವಿಧಾನ ~~ಪರಿಷತ್ತು~~,
ವಿಧಾನ ಸೌಧ,
ಬೆಂಗಳೂರು.

179
CS
12/3/20

ಮಾನ್ಯರೇ,

ವಿಷಯ:- ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಶ್ರೀನಿವಾಸಗೌಡ ಕೆ (ಕೋಲಾರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:70ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಅ.ಸ ಪತ್ರ ಸಂಖ್ಯೆ:ವಿಸಪ್ರ.ಶಾ/15ನೇವಿಸ/6ರಾ/ಚುಗು-ಚುರ.ಪ್ರಶ್ನೆ/06/2020, ದಿನಾಂಕ:03.03.2020

******

ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಶ್ರೀನಿವಾಸಗೌಡ ಕೆ (ಕೋಲಾರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:70ಕ್ಕೆ ಸಂಬಂಧಿಸಿದಂತೆ ಉತ್ತರದ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿರುತ್ತೇನೆ.

ತಮ್ಮ ನಂಬುಗೆಯ,

11/3/2020
(ಯು. ಶಿವಶಂಕರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 70 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ|ಶ್ರೀನಿವಾಸ ಗೌಡ.ಕೆ (ಕೋಲಾರ) |
| ಉತ್ತರಿಸಬೇಕಾದ ದಿನಾಂಕ | 12-03-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೋಲಾರ ಜಿಲ್ಲೆ ಎಸ್.ಎನ್.ಆರ್ ಸರ್ಕಾರಿ ಸಾರ್ವಜನಿಕ ಆಸ್ಪತ್ರೆಗೆ ಮಂಜೂರಾಗಿರುವ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು; (ವೃಂದವಾರು ಸಂಪೂರ್ಣ ವಿವರ ನೀಡುವುದು) | ಕೋಲಾರ ಜಿಲ್ಲೆ ಎಸ್.ಎನ್.ಆರ್ ಸರ್ಕಾರಿ ಸಾರ್ವಜನಿಕ ಆಸ್ಪತ್ರೆಗೆ ಆಯುಷ್ ಹುದ್ದೆಗಳು ಸೇರಿದಂತೆ ಮಂಜೂರಾಗಿರುವ ಒಟ್ಟು ಹುದ್ದೆಗಳ ಸಂಖ್ಯೆ: 278<br><br>ವೃಂದವಾರು ಸಂಪೂರ್ಣ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ | ಎಸ್.ಎನ್.ಆರ್ ಸರ್ಕಾರಿ ಸಾರ್ವಜನಿಕ ಆಸ್ಪತ್ರೆಯಲ್ಲಿ ಖಾಲಿ ಇರುವ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು; (ವೃಂದವಾರು ಸಂಪೂರ್ಣ ಮಾಹಿತಿ ನೀಡುವುದು) | ಖಾಲಿ ಇರುವ ಹುದ್ದೆಗಳ ಸಂಖ್ಯೆ: 157<br><br>ವೃಂದವಾರು ಸಂಪೂರ್ಣ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಇ | ಖಾಲಿಯಿರುವ ಹುದ್ದೆಗಳನ್ನು ಇದುವರೆವಿಗೂ ತುಂಬದಿರಲು ಕಾರಣಗಳೇನು; (ವಿವರ ನೀಡುವುದು) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ ಮಾಹಿತಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

| ಈ | ವಿವಿಧ ವೃಂದವಾರು ಹುದ್ದೆಗಳು ಖಾಲಿ ಇರುವುದರಿಂದ ರೋಗಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತುತ ಇರುವ ತಜ್ಞ ವೈದ್ಯರು ಮತ್ತು ಸಿಬ್ಬಂದಿಗಳಿಂದ ರೋಗಿಗಳಿಗೆ ಯಾವುದೇ ತೊಂದರೆಯಾಗದಂತೆ ಚಿಕಿತ್ಸೆ ನೀಡಲಾಗುತ್ತಿದೆ. |
|---|---|---|
| ಉ | ಹಾಗಿದ್ದಲ್ಲಿ; ಖಾಲಿಯಿರುವ ಹುದ್ದೆಗಳನ್ನು ಯಾವ ಕಾಲಮಿತಿಯೊಳಗಾಗಿ ತುಂಬಲಾಗುವುದು? (ವಿವರ ನೀಡುವುದು) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ತೆಗೆದುಕೊಂಡ ಕ್ರಮದ ಬಗ್ಗೆ ಮಾಹಿತಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

ಸಂ: ಆಕುಕ 17 ಹೆಚ್ ಎಸ್ ಡಿ 2020

[ಬಿ. ಶ್ರೀರಾಮುಲು]
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| (ಆ) | ಸರ್ಕಾರದ ಹಲವು ಜನಪ್ರಿಯ ಯೋಜನೆಗಳ ಹೊರತಾಗಿಯೂ ಮಕ್ಕಳ ದಾಖಲಾತಿ ಇಳಿಮುಖವಾಗುವುದನ್ನು ತಪ್ಪಿಸಲು ಮತ್ತು ಜನಪ್ರಿಯಗೊಳಿಸಲು ಸರ್ಕಾರ ಹಮ್ಮಿಕೊಂಡ ಪರಿಣಾಮಕಾರಿ ಕ್ರಮಗಳು ಯಾವುವು; | ಮಕ್ಕಳ ದಾಖಲಾತಿ ಇಳಿಮುಖವಾಗುವುದನ್ನು ತಪ್ಪಿಸಲು ಮತ್ತು ಜನಪ್ರಿಯಗೊಳಿಸಲು ಸರ್ಕಾರ ಹಮ್ಮಿಕೊಂಡ ಪರಿಣಾಮಕಾರಿ ಕ್ರಮಗಳು:<br><br>1) ಸರ್ಕಾರಿ ಶಾಲೆಗಳಲ್ಲಿ ಮಕ್ಕಳ ಸಂಖ್ಯೆಯನ್ನು ವೃದ್ಧಿಸುವ ನಿಟ್ಟಿನಲ್ಲಿ 276 ಕರ್ನಾಟಕ ಪಬ್ಲಿಕ್ ಶಾಲೆಗಳಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಲಾಗಿದೆ. ಗುಣಾತ್ಮಕ ಶಿಕ್ಷಣಕ್ಕಾಗಿ ಅತಿಥಿ ಶಿಕ್ಷಕರು ಮತ್ತು ಆಯಾಗಳನ್ನು ನೇಮಿಸಲಾಗಿದ್ದು, ತರಬೇತಿಯನ್ನು ನೀಡಲಾಗಿದೆ. ತರಗತಿಗಳಿಗೆ ಕಲಿಕೋಪಕರಣಗಳ ಕಿಟ್‌ಗಳನ್ನು ನೀಡಲಾಗಿದೆ.<br><br>2) 2019–20ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರಿ ಶಾಲೆಗಳಲ್ಲಿ ಗುಣಮಟ್ಟದ ಸುಧಾರಣೆಗಾಗಿ ಗ್ರಾಮ ಪಂಚಾಯತ್ ಕೇಂದ್ರ ಸ್ಥಳಗಳಲ್ಲಿ 1 ರಿಂದ 12ನೇ ತರಗತಿಯವರೆಗೆ ತಾಲ್ಲೂಕಿಗೆ ಒಂದರಂತೆ ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭಿಸಲಾಗಿದೆ.<br><br>3)2019–20ನೇ ಸಾಲಿನಲ್ಲಿ 1001 ಸರ್ಕಾರಿ ಶಾಲೆಗಳಲ್ಲಿ ಇಂಗ್ಲೀಷ್ ಮಾಧ್ಯಮ ತರಗತಿಗಳನ್ನು ಪ್ರಾರಂಭಿಸಲಾಗಿದೆ.<br><br>4) ಗುಣಮಟ್ಟ ಶಿಕ್ಷಣಕ್ಕೆ ಇಂಗ್ಲೀಷ್ ನಲಿ–ಕಲಿ ಅನುಷ್ಠಾನ ಮಾಡಲಾಗುತ್ತಿದೆ. |
|---|---|---|
| (ಇ) | ಸರ್ಕಾರಿ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ಇಲಾಖೆಯ ಉದಾಸೀನತೆ, ಸಿಬ್ಬಂದಿ ವರ್ಗಗಳ ಕೊರತೆ ಮತ್ತಿತರ ಲೋಪದೋಷಗಳನ್ನು ಸರಿಪಡಿಸುವಲ್ಲಿ ಸರ್ಕಾರದ ಕ್ರಮಗಳು ಯಶಸ್ವಿಯಾಗುವಂತೆ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು? | ವಿವಿಧ ಯೋಜನೆಗಳಡಿ ಸರ್ಕಾರಿ ಶಾಲೆಗಳಲ್ಲಿನ ಶಾಲಾ ಕೊಠಡಿಗಳ ದುರಸ್ಥಿ ಮತ್ತು ಮರುನಿರ್ಮಾಣಕ್ಕಾಗಿ ಅನುದಾನ ಒದಗಿಸಲಾಗಿದ್ದು, ವಿವರವನ್ನು ಅನುಬಂಧ ದಲ್ಲಿ ಒದಗಿಸಿದೆ.<br>ಗೌರವಾನ್ವಿತ ಕರ್ನಾಟಕ ಉಚ್ಚನ್ಯಾಯಾಲಯದ ಆದೇಶದಂತೆ, 667 ಸರ್ಕಾರಿ ಶಾಲೆಗಳಿಗೆ ಮೂಲ ಸೌಕರ್ಯವನ್ನು ಒದಗಿಸಲು ಅನುದಾನ ಬಿಡುಗಡೆ ಮಾಡಲಾಗಿದೆ. |

**ಇಪಿ 64 ಯೋಸಕ 2020**

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

ವಿಧಾನ ಸಭೆ ಪ್ರಶ್ನೆ ಸಂಖ್ಯೆ:973ಕ್ಕೆ ಅನುಬಂಧ

1] ರಾಜ್ಯ ವಲಯ ಯೋಜನೆಯಡಿ ಶಾಲಾ ಕೊಠಡಿಗಳ ದುರಸ್ಥಿ ಮತ್ತು ಮರುನಿರ್ಮಾಣಕ್ಕಾಗಿ ಬಿಡುಗಡೆಯಾದ ಅನುದಾನದ ವಿವರ

| ಕ್ರ.ಸಂ | ಕಾರ್ಯಕ್ರಮ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆ ಮಾಡಲಾದ ಅನುದಾನ (ರೂ ಕೋಟಿಗಳಲ್ಲಿ) |
|---|---|---|---|---|
| 1 | ಪ್ರಾಥಮಿಕ ಶಾಲಾ ಕೊಠಡಿಗಳ ದುರಸ್ಥಿ | 441 | 2872 | 96.00 |
| 2 | ಪ್ರೌಢ ಶಾಲಾ ಕೊಠಡಿಗಳ ದುರಸ್ಥಿ | 455 | 1962 | 15.78 |
| 3 | ಪ್ರಾಥಮಿಕ ಶಾಲಾ ಕೊಠಡಿಗಳ ಮರುನಿರ್ಮಾಣ | 329 | 613 | 70.00 |
| 4 | ಪ್ರೌಢ ಶಾಲಾ ಕೊಠಡಿಗಳ ಮರುನಿರ್ಮಾಣ | 117 | 158 | 25.00 |

2] ವಿಶೇಷ ಪ್ಯಾಕೇಜ್ ಯೋಜನೆಯಡಿ ಶಾಲಾ ಕೊಠಡಿಗಳ ಮರು ನಿರ್ಮಾಣಕ್ಕಾಗಿ ಒದಗಿಸಲಾದ ಅನುದಾನ :

| ಕ್ರ.ಸಂ | ಶಾಲೆಗಳು | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆ ಮಾಡಲಾದ ಅನುದಾನ (ರೂ.ಕೋಟಿಗಳಲ್ಲಿ) |
|---|---|---|---|---|
| 1 | ಪ್ರಾಥಮಿಕ | 1043 | 1525 | 161.65 |
| 2 | ಪ್ರೌಢ | 388 | 878 | 138.28 |

3] ಪ್ರಕೃತಿ ವಿಕೋಪದಿಂದ ಹಾನಿಗೊಳಗಾದ 13 ಜಿಲ್ಲೆಗಳ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕೊಠಡಿ ದುರಸ್ಥಿಗಾಗಿ ಕಂದಾಯ ಇಲಾಖೆಯಿಂದ ಒದಗಿಸಲಾದ ಅನುದಾನ :

| ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆ ಮಾಡಲಾದ ಅನುದಾನ (ರೂ ಕೋಟಿಗಳಲ್ಲಿ) |
|---|---|---|
| 6196 | 13260 | 199.51 |

4] ನಬಾರ್ಡ್ ಸಹಯೋಗದ ಆರ್.ಐ.ಡಿ.ಎಫ್–25ರ ಯೋಜನೆಯಡಿ ಮಳೆಯಿಂದ ಹಾನಿಗೊಳಗಾದ ಸರ್ಕಾರಿ ಶಾಲೆಗಳ ಕೊಠಡಿಗಳ ಮರು ನಿರ್ಮಾಣಕ್ಕಾಗಿ ಆಡಳಿತಾತ್ಮಕ ಅನುಮೋದನೆ ನೀಡಲಾದ ಅನುದಾನದ ವಿವರ :

| ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಅನುದಾನದ ಮೊತ್ತ (ರೂ. ಕೋಟಿಗಳಲ್ಲಿ) |
|---|---|---|
| 3386 | 6469 | 782.53 |

## ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 73 ಆರ್ಎ ಸೆಶೆ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 12.03.2020

63
415
12/03/2020

ಇವರಿಂದ:-
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು
ಶಿಕ್ಷಣ ಇಲಾಖೆ, (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

ಇವರಿಗೆ:-
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ~~ಪರಿಷತ್ತು~~ ಸಭೆ
ವಿಧಾನ ಸೌಧ,
**ಬೆಂಗಳೂರು.**

**ಮಾನ್ಯರೇ,**

**ವಿಷಯ** :- ಮಾನ್ಯ ವಿಧಾನ ~~ಪರಿಷತ್~~ ಸಭಾ ಸದಸ್ಯರಾದ ಶ್ರೀ ಗೌರಿಶಂಕರ್ ಡಿ.ಸಿ
ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ: 416 ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ~~ಪರಿಷತ್~~ ಸಭೆಯ ಸದಸ್ಯರಾದ ಶ್ರೀ ಶ್ರೀ ಗೌರಿ ಶಂಕರ್ ಡಿ.ಸಿ ಇವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ : 416 ಉತ್ತರವನ್ನು 100/~~50~~ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿ ಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಎಸ್.ಆರ್.ಎಸ್.ನಾಧನ್)
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ (ಪ್ರಾಥಮಿಕ ಹಾಗೂ ಪ್ರೌಢ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 416 |
| ಸದಸ್ಯರ ಹೆಸರು | : | ಶ್ರೀ ಗೌರಿಶಂಕರ್ ಡಿ.ಸಿ<br>(ತುಮಕೂರು ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | : | 12.03.2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

<table>
<tr><th>ಕ್ರಸ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ತುಮಕೂರು ಗ್ರಾಮಾಂತರ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕೆ.ಪಿ.ಎಸ್. ಶಾಲೆಗಳಲ್ಲಿ ಎಲ್.ಕೆ.ಜಿ / ಯು.ಕೆ.ಜಿ ಮತ್ತು ಪ್ರಾಥಮಿಕ ಒಂದನೇ ತರಗತಿ ಮತ್ತು ಮುಂದುವರಿದ ತರಗತಿಗಳಿಗೆ ಇಂಗ್ಲೀಷ್ ಮಾಧ್ಯಮಕ್ಕೆ ವ್ಯಾಸಂಗ ಮಾಡಲು ಒಂದು ತರಗತಿಗೆ 30 ಮಕ್ಕಳಿಗೆ ಮಾತ್ರ ದಾಖಲಾತಿಗೆ ಅವಕಾಶವಿರುವುದು ಸರ್ಕಾರದ ಗಮನದಲ್ಲಿದೆಯೇ; ವಿಧಿಸಿದ ಮಿತಿಗಿಂತ ಬೇಡಿಕೆ ಹೆಚ್ಚಾಗಿರುವುದು ಎಷ್ಟು; ಇದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಸಂಪೂರ್ಣ ವಿವರ ನೀಡುವುದು)</td><td>ಇದೆ.<br><br>ತುಮಕೂರು ಗ್ರಾಮಾಂತರ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ 2 ಕೆ.ಪಿ.ಎಸ್. ಶಾಲೆಗಳಲ್ಲಿ ದಾಖಲಾತಿ ಈ ಕೆಳಕಂಡಂತೆ ಇರುತ್ತದೆ.
<table>
<tr><th>ಶಾಲೆಯ ಹೆಸರು</th><th>ವರ್ಗ</th><th>ನಿಗದಿತ ದಾಖಲಾತಿ</th><th>ವಿಧಿಸಿದ ಮಿತಿಗಿಂತ ಹೆಚ್ಚು ಬೇಡಿಕೆ</th></tr>
<tr><td rowspan="2">ಕೆಪಿಎಸ್ ಬೆಳ್ಳಾವಿ</td><td>ಎಲ್.ಕೆ.ಜಿ</td><td>30</td><td>60</td></tr>
<tr><td>1ನೇ ತರಗತಿ</td><td>30</td><td>48</td></tr>
<tr><td rowspan="2">ಕೆಪಿಎಸ್ ನಾಗವಲ್ಲಿ</td><td>ಎಲ್.ಕೆ.ಜಿ</td><td>30</td><td>15</td></tr>
<tr><td>1ನೇ ತರಗತಿ</td><td>30</td><td>15</td></tr>
</table>
ಆರ್‌ಟಿಇ ಕಾಯ್ದೆ 2009ರಂತೆ ವಿದ್ಯಾರ್ಥಿ ಶಿಕ್ಷಕರ ಅನುಪಾತ 30:1 ಇದ್ದು, ಅದರಂತೆ ಗುಣಾತ್ಮಕ ಶಿಕ್ಷಣ ನೀಡುವ ನಿಟ್ಟಿನಲ್ಲಿ ಆಂಗ್ಲ ಮಾಧ್ಯಮ ತರಗತಿಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿಯನ್ನು 30ಕ್ಕೆ ನಿಗದಿಪಡಿಸಲಾಗಿದೆ.</td></tr>
<tr><td>(ಆ)</td><td>ಇಂಗ್ಲೀಷ್ ಮಾಧ್ಯಮ ವ್ಯಾಸಂಗ ಮಾಡಲು ಹೆಚ್ಚಿನ ಬೇಡಿಕೆ ಪೂರೈಸುವುದರ ಬಗ್ಗೆ ಸರ್ಕಾರದ ನಿಲುವೇನು;</td><td>ಎಲ್ಲಾ 1ನೇ ಹಾಗೂ 2ನೇ ತರಗತಿಯ ಕನ್ನಡ ಮಾಧ್ಯಮ ವಿಭಾಗಗಳಲ್ಲಿ ಭದ್ರವಾದ ಆಂಗ್ಲ ಭಾಷಾ ಬುನಾದಿಯನ್ನು ನೀಡಿ ಮಕ್ಕಳ ಆಂಗ್ಲ ಭಾಷಾ ಕೌಶಲಗಳನ್ನು ವೃದ್ಧಿಪಡಿಸಲು ಹಾಗು ಆಂಗ್ಲ ಭಾಷಾ ಕಲಿಕೆಯನ್ನು ಪರಿಣಾಮಕಾರಿಗೊಳಿಸಲು 2019-20ನೇ ಸಾಲಿನಲ್ಲಿ ಪ್ರಾರಂಭಿಸಲಾದ 1001 ಆಂಗ್ಲ ಮಾಧ್ಯಮ ವಿಭಾಗಗಳು ಸೇರಿದಂತೆ 2000 ನಲಿಕಲಿ ಘಟಕಗಳಲ್ಲಿ ಇಂಗ್ಲೀಷ್ ನಲಿ-ಕಲಿ ಪಠ್ಯಕ್ರಮವನ್ನು ಪ್ರಾಯೋಗಿಕವಾಗಿ ಅನುಸರಿಸಲಾಗುತ್ತಿದೆ.<br>2020-21 ನೇ ಸಾಲಿಗೆ ಕನ್ನಡ ಮಾಧ್ಯಮದ 55,530 ಹಾಗು ಉರ್ದು ಮಾಧ್ಯಮದ 5,100 ನಲಿಕಲಿ ಘಟಕಗಳಲ್ಲಿ 'ಇಂಗ್ಲಿಷ್ ನಲಿಕಲಿ ತರಗತಿ -01'ರ ಪಠ್ಯಕ್ರಮವನ್ನು ಜಾರಿಗೆ ತರಲು ಅಗತ್ಯ ಪೂರ್ವಸಿದ್ಧತೆಗಳನ್ನು ಕೈಗೊಳ್ಳಲಾಗುತ್ತಿದೆ. ಈ ಬಗ್ಗೆ ಕಲಿಕಾ ಸಾಮಗ್ರಿಗಳನ್ನು ಮುದ್ರಿಸಿ ಒದಗಿಸಲು ಸಚಿವ ಸಂಪುಟದಿಂದಲೂ ಅನುಮೋದನೆ ಪಡೆಯಲಾಗಿದ್ದು, 'ಕರ್ನಾಟಕ ಪಠ್ಯಪುಸ್ತಕ ಸಂಘ' ಈಗಾಗಲೇ ಪ್ರಕ್ರಿಯೆಯನ್ನು ಚಾಲ್ತಿಗೊಳಿಸಿದೆ.</td></tr>
<tr><td>(ಇ)</td><td>ತುಮಕೂರು ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪೌಢಶಾಲೆಗಳಲ್ಲಿ ಶಿಥಿಲವಾಗಿರುವ ಕಟ್ಟಡಗಳೆಷ್ಟು; ಶಾಲಾವಾರು ವಿವರಗಳನ್ನು ನೀಡುವುದು ಹಾಗೂ ಶಿಥಿಲ ವ್ಯವಸ್ಥೆಯಲ್ಲಿರುವ ಕಟ್ಟಡಗಳನ್ನು ಮರು ನಿರ್ಮಾಣ ಮಾಡಲು ಎಷ್ಟು ಅನುದಾನದ ಅಗತ್ಯವಿದೆ;<br>ಈ ಅನುದಾನ ಒದಗಿಸುವ ಬಗ್ಗೆ ಸರ್ಕಾರದ ತೀರ್ಮಾನವೇನು?</td><td>ಪ್ರಾಥಮಿಕ ಹಂತದಲ್ಲಿ 351 ಕೊಠಡಿಗಳು ದೊಡ್ಡ ಪ್ರಮಾಣದಲ್ಲಿ ದುರಸ್ಥಿ ಅವಶ್ಯಕತೆ ಹೊಂದಿದ್ದು, ಪ್ರೌಢಶಾಲೆಗಳಲ್ಲಿ 17 ಕಟ್ಟಡಗಳು ದೊಡ್ಡ ಪ್ರಮಾಣದ ದುರಸ್ಥಿ ಅವಶ್ಯಕತೆಯನ್ನು ಹೊಂದಿರುತ್ತದೆ.<br>ಶಾಲಾವಾರು ವಿವರವನ್ನು ಅನುಬಂಧದಲ್ಲಿ ಒದಗಿಸಿದೆ.<br>ಶಿಥಿಲಾವಸ್ಥೆಯಲ್ಲಿರುವ ಕೊಠಡಿಗಳನ್ನು ಮರುನಿರ್ಮಾಣ ಮಾಡಲು ರೂ.4303.4 ಲಕ್ಷಗಳ ಅನುದಾನ ಅಗತ್ಯವಿರುತ್ತದೆ.<br>ಪ್ರತಿ ವರ್ಷ ಆಯವ್ಯಯದಲ್ಲಿ ಹಂಚಿಕೆಯಾಗುವ ಅನುದಾನದ ಲಭ್ಯತೆಯನ್ನಾಧರಿಸಿ, ಹಂತ ಹಂತವಾಗಿ ಅನುದಾನ ಒದಗಿಸಲಾಗುತ್ತಿದೆ.</td></tr>
</table>

ಇಪಿ 73 ಯೋಸಕ 2020

(ಎಸ್.ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

**ಕರ್ನಾಟಕ ಸರ್ಕಾರ**

ಸಂಖ್ಯೆ: ಇಡಿ 10 ಪಿಎಂಎ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:13-03-2020.

195
12/3/2020

ಇಂದ:

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ :

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು-01.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್ ಗೌಡ (ನಾಗಮಂಗಲ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:26 ಕ್ಕೆ ಉತ್ತರ ನೀಡುವ ಕುರಿತು.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್ ಗೌಡ (ನಾಗಮಂಗಲ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:26 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಎಲ್. ಶರಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪ್ರಾಥಮಿಕ ಶಿಕ್ಷಣ) ಶಿಕ್ಷಣ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 26

ಸದಸ್ಯರ ಹೆಸರು : ಶ್ರೀ ಸುರೇಶ್ ಗೌಡ (ನಾಗಮಂಗಲ)

ಉತ್ತರಿಸಬೇಕಾದ ದಿನಾಂಕ : 12-03-2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯಾದ್ಯಂತ ತಾಲ್ಲೂಕುವಾರು ನಿರ್ಮಿಸಿರುವ ಶಿಕ್ಷಕರ ಭವನ/ಗುರು ಭವನಗಳ ನಿರ್ವಹಣೆಗಾಗಿ ರಚಿಸುವ ನಿರ್ವಹಣಾ ಸಮಿತಿಗೆ ನಿಗದಿ ಪಡಿಸಿರುವ ಮಾನದಂಡಗಳೇನು; | ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ ಮತ್ತು ರಾಷ್ಟ್ರೀಯ ಶಿಕ್ಷಕರ ಪ್ರತಿಷ್ಠಾನ, ಬೆಂಗಳೂರು ಇವರಿಂದ ಹೊರಡಿಸಲಾಗಿರುವ ಸುತ್ತೋಲೆ 11-09-2014 ಮತ್ತು 03-03-2018ರಲ್ಲಿ ಗುರುಭವನ ನಿರ್ವಹಣೆಗಾಗಿ ಹಾಗೂ ನಿರ್ಮಾಣದ ನಂತರದ ನಿರ್ವಹಣೆಯ ಮಾರ್ಗಸೂಚಿಗಳ ಬಗ್ಗೆ ವಿವರಣೆಯನ್ನು ನೀಡಲಾಗಿದೆ. (ಪ್ರತಿ ಲಗತ್ತಿಸಿದೆ.) |
| ಆ. | ರಾಜ್ಯಾದ್ಯಂತ ಇರುವ ಎಲ್ಲಾ ಶಿಕ್ಷಕರ ಭವನಗಳಿಗೆ ಒಂದೇ ರೀತಿಯ ಮಾನದಂಡಗಳನ್ನು ಅಳವಡಿಸಿ ಸಮಿತಿ ರಚಿಸಿ ನಿರ್ವಹಣಾ ಮೇಲ್ವಿಚಾರಣೆಗಳನ್ನು ನಡೆಸಲಾಗುತ್ತಿದೆಯೇ; | ಹೌದು |
| ಇ. | ನಾಗಮಂಗಲ ತಾಲ್ಲೂಕಿನ ಶಿಕ್ಷಕರ ಭವನ/ಗುರು ಭವನದಲ್ಲಿ ಖಾಸಗಿ ವ್ಯಕ್ತಿಗಳು ಸಮಿತಿ ರಚಿಸಿ ಅವರ ಮೇಲ್ವಿಚಾರಣೆ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಈ. | ಹಾಗಿದ್ದಲ್ಲಿ, ಕಾನೂನು ಬಾಹಿರವಾಗಿ ಸಮಿತಿ ರಚಿಸಿ ಮೇಲ್ವಿಚಾರಣೆ ನಡೆಸುತ್ತಿರುವವರ ವಿರುದ್ಧ ಸರ್ಕಾರ ಏನು ಕ್ರಮ ಜರುಗಿಸಿದೆ? | ಕಾನೂನು ಬಾಹಿರವಾಗಿ ಸಮಿತಿ ರಚಿಸಿ ಮೇಲ್ವಿಚಾರಣೆ ನಡೆಸುತ್ತಿರುವ ಶಿಕ್ಷಕರ ವಿರುದ್ಧ ಸರ್ಕಾರವು ಶಿಸ್ತುಕ್ರಮ ಜರುಗಿಸಿ ಕ್ರಿಮಿನಲ್ ಮೊಕ್ಕದಮೆ ದಾಖಲಿಸಲು ಸಂಬಂಧಿಸಿದ ಉಪನಿರ್ದೇಶಕರಿಗೆ ಆದೇಶಿಸಲಾಗಿತ್ತು. |

|  |  |  |
| --- | --- | --- |
|  |  | ಈ ಶಿಸ್ತು ಕ್ರಮದ ಆದೇಶದ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯವು ತಡೆಯಾಜ್ಞೆ ನೀಡಿರುತ್ತದೆ. (57867-871). ತಡೆಯಾಜ್ಞೆಯನ್ನು ತೆರವುಗೊಳಿಸುವ ಕುರಿತಂತೆ ಕ್ರಮವಹಿಸಲಾಗುತ್ತಿದೆ. ಪ್ರಸ್ತುತ ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ. |

ಇಪಿ 10 ಪಿಎಂಎ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ ಮತ್ತು
ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ, ಶಿಕ್ಷಕರ ಸದನ, ಕೆ.ಜಿ.ರಸ್ತೆ, ಬೆಂಗಳೂರು-02.

ದೂರವಾಣಿ : 080-22483434 ಫ್ಯಾಕ್ಸ್ : 080-22483860 ಇ-ಮೇಲ್: kstbf63@gmail.com

ಸಂಖ್ಯೆ: ಶಿ.ಕ.ನಿ ಗು.ಭ.ಮಾ.ಸೂ 01/2014-15. ದಿನಾಂಕ: 11-09-2014

## ಸುತ್ತೋಲೆ

ವಿಷಯ: ಜಿಲ್ಲಾ ಮತ್ತು ತಾಲ್ಲೂಕ್ ಕೇಂದ್ರಗಳ ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಮಾರ್ಗಸೂಚಿ.

ಉಲ್ಲೇಖ: 1. ಈ ಕಛೇರಿಯ ಸುತ್ತೋಲೆ ಸಂಖ್ಯೆ: ಎಫ್.1 ಗು.ಭ.ಅಪೂರ್ಣ ಶಾ.ಹೆ.ಅ.ಮಂ.01/2009-10/ದಿನಾಂಕ: 16-07-2009.
2. ಈ ಕಛೇರಿಯ ಸುತ್ತೋಲೆ ಸಂಖ್ಯೆ:ಶಿಕನಿ/ಆಡಳಿತ(1)ಗು.ಭ. ಇತರೆ 28(ಪಿ)/2013-14/ದಿನಾಂಕ: 03-10-2013.
3. ಜಿಲ್ಲೆ ಮತ್ತು ತಾಲ್ಲೂಕ್‌ಗಳಿಂದ ಶಿಕ್ಷಕರು ಹಾಗು ಸಾರ್ವಜನಿಕರಿಂದ ಸ್ವೀಕೃತವಾದ ದೂರುಗಳು.
4. ಈ ಕಛೇರಿಯ ಅಧಿಕಾರಿಗಳು ಜಿಲ್ಲೆ/ತಾಲ್ಲೂಕ್‌ಗಳಿಗೆ ಬೇಟಿ ಮಾಡಿದಾಗ ಪರಿಶೀಲನೆಯಿಂದ ಗಮನಕ್ಕೆ ಬಂದ ಅಂಶಗಳು.

***

ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಯು 1962 ರಲ್ಲಿ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನವನ್ನು ಅಸ್ತಿತ್ವಕ್ಕೆ ತಂದು, ರಾಜ್ಯಗಳಲ್ಲೂ ಇದರ ಘಟಕಗಳನ್ನು ಸ್ಥಾಪಿಸಲು ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಗಳಿಗೆ ನಿರ್ದೇಶನ ನೀಡಿರುತ್ತಾರೆ. ಅದರಂತೆ ಕರ್ನಾಟಕ ರಾಜ್ಯದಲ್ಲೂ ಇದರ ಘಟಕವನ್ನು ಸ್ಥಾಪಿಸಲಾಗಿದೆ. ಇದರ ಜೊತೆಗೆ 1963 ರಲ್ಲಿ ಕರ್ನಾಟಕ ಸರ್ಕಾರವು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗು ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿಗಳನ್ನು ಸ್ಥಾಪಿಸಿ, ರಾಜ್ಯದ ಪ್ರಾಥಮಿಕ ಶಾಲೆಯಿಂದ ವಿಶ್ವವಿದ್ಯಾಲಯದ ವರೆವಿಗಿನ ವಿವಿಧ ಹಂತದ ವಿದ್ಯಾರ್ಥಿಗಳು ಹಾಗು ಶಿಕ್ಷಕರಿಗೆ ಅನುಕೂಲಕರವಾದ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

ಇವುಗಳಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಿಸಲು ಅನುದಾನ ನೀಡುವುದರ ಮೂಲಕ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ಪೂರಕವಾದ ಸ್ಥಳಾವಕಾಶ ನಿರ್ಮಿಸಲಾಗುತ್ತಿದೆ. ಗುರುಭವನಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಶಾಲೆಗಳ ಆವರಣದಲ್ಲಿ ಹೆಚ್ಚುವರಿಯಾಗಿರುವ ಖಾಲಿ ಜಾಗವನ್ನು ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಗುರುಭವನ ನಿರ್ಮಾಣ ಸಮಿತಿಗೆ ನೀಡಲಾಗುತ್ತಿದೆ. ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಿಂದ ನೀಡುವ ಅನುದಾನದ ಜೊತೆಗೆ ಉಳಿದ ಮೊತ್ತವನ್ನು ವಿಧಾನಸಭೆ, ವಿಧಾನ ಪರಿಷತ್ ಹಾಗು ಲೋಕಸಭಾ ಸದಸ್ಯರ ಕ್ಷೇತ್ರಾಭಿವೃದ್ಧಿ ನಿಧಿಯಿಂದ ಹಾಗು ಸ್ಥಳೀಯವಾಗಿ ಇತರೆ ಮೂಲಗಳಿಂದ ಹೊಂದಿಸಿಕೊಂಡು, ಇದಕ್ಕೆ ಅಗತ್ಯ ನೀಲನಕ್ಷೆ, ಅಂದಾಜು ವೆಚ್ಚ ಸಿದ್ಧಪಡಿಸಿ, ನಿರ್ಮಾಣಕ್ಕೆ ಸ್ಥಳೀಯ ಪ್ರಾಧಿಕಾರಿಗಳಾದ ಮಹಾನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣ ಪಂಚಾಯಿತಿಗಳಿಂದ ಲೈಸನ್ಸ್ ಪಡೆದು ನಿರ್ಮಿಸಲಾಗುತ್ತಿದೆ.

ನಿರ್ಮಾಣ ಪೂರ್ಣಗೊಂಡ ನಂತರ ಇದನ್ನು ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಶೈಕ್ಷಣಿಕ ಚಟುವಟಿಕೆಗಳಿಗೆ ಪೂರಕವಾದ ಕಾರ್ಯಕ್ರಮಗಳಿಗಾಗಿ ಬಳಸಲಾಗುತ್ತಿದೆ. ಉಲ್ಲೇಖ(1),(2)ರ ಕಛೇರಿ ಸುತ್ತೋಲೆಗಳು ಹಾಗೂ ಗುರುಭವನ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವಾಗ ಕೆಲವು ನಿಬಂಧನೆಗಳನ್ನು ಹಾಕಿ ಅನುಮೋದನೆ ನೀಡಲಾಗುತ್ತಿದೆ.

ಆದರೂ ಗುರುಭವನ ನಿರ್ಮಾಣ, ಗುರುಭವನ ಸಮಿತಿ ರಚನೆ, ನಿರ್ವಹಣೆಗೆ ಸಂಬಂಧಿಸಿದಂತೆ, ಶಿಕ್ಷಕರು ಹಾಗು ಸಾರ್ವಜನಿಕರಿಂದ ಹಲವಾರು ದೂರುಗಳು ಬಂದಿರುತ್ತವೆ. ಇಂತಹ ದೂರುಗಳನ್ನು ಈ ಕಛೇರಿಯ ಅಧಿಕಾರಿಗಳು ಜಿಲ್ಲೆ-ತಾಲ್ಲೂಕುಗಳಿಗೆ ಬೇಟಿ ನೀಡಿದಾಗಲೂ ಗಮನಿಸಲಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಜಿಲ್ಲಾ ಗುರುಭವನ ಹಾಗು ತಾಲ್ಲೂಕು ಗುರುಭವನ ನಿರ್ಮಾಣ ಹಾಗು ನಿರ್ವಹಣೆಗೆ

ಸಂಬಂಧಿಸಿದಂತೆ ಈ ಕೆಳಕಂಡಂತೆ ಮಾರ್ಗಸೂಚಿ ಹೊರಡಿಸಿದೆ. ಇದನ್ನು ಕಟ್ಟುನಿಟ್ಟಾಗಿ ಪಾಲಿಸಲು ಸಂಬಂಧಪಟ್ಟ ಎಲ್ಲರಿಗೂ ಸೂಚಿಸಿದೆ.

ಗುರುಭವನಗಳ ನಿರ್ಮಾಣಕ್ಕೆ ಮೊದಲು ಈ ಕೆಳಗಿನಂತೆ ಸಮಿತಿಗಳ ರಚನೆ ಮಾಡಿಕೊಳ್ಳಬೇಕು.

ಅನುಬಂಧ – ೬

**ತಾಲ್ಲೂಕು ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ರಚಿಸಿಕೊಳ್ಳಬೇಕಾದ ಸಮಿತಿ**

| | | |
|---|---|---|
| 1. | ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು | ಅಧ್ಯಕ್ಷರು |
| 2. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ತಾಲ್ಲೂಕು ಅಧ್ಯಕ್ಷರು | ಉಪಾಧ್ಯಕ್ಷರು |
| 3. | ತಾಲ್ಲೂಕು ಪ್ರೌಢಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರು | ಉಪಾಧ್ಯಕ್ಷರು |
| 4. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ತಾಲ್ಲೂಕು ಕಾರ್ಯದರ್ಶಿ | ಕಾರ್ಯದರ್ಶಿಗಳು |
| 5. | ಸ್ಥಳಿಯ ಪ್ರೌಢ ಶಾಲಾ ಮುಖ್ಯೋಪಾಧ್ಯಾಯರು/ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರು | ಖಜಾಂಚಿಗಳು |
| 6. | ಕಾಲೇಜು ಉಪನ್ಯಾಸಕರ ಸಂಘದ ಅಧ್ಯಕ್ಷರು | ಸದಸ್ಯರು |
| 7. | ಮಹಿಳಾ ಶಿಕ್ಷಕರು(ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ನೇಮಕ ಮಾಡಲ್ಪಟ್ಟ ಯಾವುದೇ ದರ್ಜೆಯ ಶಿಕ್ಷಕರು) | ಸದಸ್ಯರು |
| 8. | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಶಿಕ್ಷಕರ / ಉಪನ್ಯಾಸಕರ ಪ್ರತಿನಿಧಿ (ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ನೇಮಕ ಮಾಡಲ್ಪಟ್ಟ ಪ್ರತಿನಿಧಿ) | ಸದಸ್ಯರು |
| 9. | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಹಿರಿಯ ಶಾಲಾ ತನಿಖಾಧಿಕಾರಿಗಳು | ಸದಸ್ಯರು |

ವಿ.ಸೂ: ಗುರುಭವನದ ಹಣಕಾಸಿನ ವಹಿವಾಟನ್ನು ಅಧ್ಯಕ್ಷರು ಹಾಗೂ ಖಜಾಂಚಿಗಳು ಜಂಟಿಯಾಗಿ ನಿರ್ವಹಿಸತಕ್ಕದ್ದು.

**ಜಿಲ್ಲಾ ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ರಚಿಸಿಕೊಳ್ಳಬೇಕಾದ ಸಮಿತಿ**

| | | |
|---|---|---|
| 1. | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು (ಆಡಳಿತ) | ಅಧ್ಯಕ್ಷರು |
| 2. | ಪದವಿಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು | ಹಿರಿಯ ಉಪಾಧ್ಯಕ್ಷರು |
| 3. | ಜಿಲ್ಲಾ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರ ಸಂಘದ ಅಧ್ಯಕ್ಷರು | ಉಪಾಧ್ಯಕ್ಷರು |
| 4. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಜಿಲ್ಲಾ ಅಧ್ಯಕ್ಷರು | ಉಪಾಧ್ಯಕ್ಷರು |
| 5. | ಜಿಲ್ಲಾ ಪ್ರೌಢಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರು | ಉಪಾಧ್ಯಕ್ಷರು |
| 6. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಜಿಲ್ಲಾ ಕಾರ್ಯದರ್ಶಿ | ಕಾರ್ಯದರ್ಶಿಗಳು |
| 7. | ಜಿಲ್ಲಾ ಪ್ರೌಢ ಶಾಲಾ ಮುಖ್ಯೋಪಾಧ್ಯಾಯರ ಮತ್ತು ಸಂಯುಕ್ತ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲರ ಸಂಘದ ಕಾರ್ಯದರ್ಶಿ. | ಖಜಾಂಚಿಗಳು |
| 8. | ಸ್ಥಳೀಯ ಜಿಲ್ಲಾ ಶಿಕ್ಷಕರ ಮತ್ತು ತರಬೇತಿ ಸಂಸ್ಥೆಯ / ಶಿಕ್ಷಣ ಮಹಾವಿದ್ಯಾಲಯದ ಪ್ರಾಂಶುಪಾಲರ ಪ್ರತಿನಿಧಿಗಳು. | ಸದಸ್ಯರು |
| 9. | ಮಹಿಳಾ ಶಿಕ್ಷಕರು (ಜಿಲ್ಲಾ ಉಪನಿರ್ದೇಶಕರಿಂದ ನೇಮಕ ಮಾಡಲ್ಪಟ್ಟ ಯಾವುದೇ ದರ್ಜೆಯ ಶಿಕ್ಷಕರು) | ಸದಸ್ಯರು |
| 10. | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಶಿಕ್ಷಕರ ಪ್ರತಿನಿಧಿ (ಜಿಲ್ಲಾ ಉಪನಿರ್ದೇಶಕರಿಂದ ನೇಮಕ ಮಾಡಲ್ಪಟ್ಟ ಪ್ರತಿನಿಧಿ) | ಸದಸ್ಯರು |
| 11. | ಜಿಲ್ಲಾ ಕಾಲೇಜು ಉಪನ್ಯಾಸಕರ ಸಂಘದ ಅಧ್ಯಕ್ಷರು (ವೈದ್ಯಕೀಯ/ತಾಂತ್ರಿಕ ಶಿಕ್ಷಣ ) | ಸದಸ್ಯರು |
| 12. | ಸೇವಾ ಹಿರಿತನದಲ್ಲಿರುವ ಉಪನಿರ್ದೇಶಕರ ಕಛೇರಿಯ ಶಿಕ್ಷಣಾಧಿಕಾರಿಗಳು. | ಸದಸ್ಯರು |
| 13. | ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು. | ಸದಸ್ಯರು |

ವಿ.ಸೂ: ಗುರುಭವನದ ಹಣಕಾಸಿನ ವಹಿವಾಟನ್ನು ಅಧ್ಯಕ್ಷರು ಹಾಗೂ ಖಜಾಂಚಿಗಳು ಜಂಟಿಯಾಗಿ ನಿರ್ವಹಿಸತಕ್ಕದ್ದು.

## ಗುರುಭವನ ನಿರ್ಮಾಣ ಮಾಡಲು ಮಾರ್ಗಸೂಚಿ:

1. ಈ ಸಮಿತಿಯ ಪ್ರಾರಂಭದಲ್ಲಿ ಒಂದು ಸೀಡ್ ಫಂಡ್‌ನ್ನು ಹೊಂದಿಸಿಕೊಂಡು, ಅಧ್ಯಕ್ಷರು ಹಾಗು ಖಜಾಂಚಿಗಳ ಹೆಸರಿನಲ್ಲಿ ಜಂಟಿ ಖಾತೆಯನ್ನು ಸ್ಥಳೀಯ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ತೆರೆಯಬೇಕು.
2. ಗುರುಭವನ ಇಲ್ಲದ ಜಿಲ್ಲೆ/ತಾಲ್ಲೂಕ್ ರವರು ಗುರುಭವನ ನಿರ್ಮಾಣಕ್ಕೆ ಸಂಬಂಧಿಸಿದಂತೆ, ಸಮಿತಿಯ ಸಭೆ ನಡೆಸಿ ತೀರ್ಮಾನ ತೆಗೆದುಕೊಳ್ಳಬೇಕು ಹಾಗು ನಡಾವಳಿ ದಾಖಲಿಸಬೇಕು.
3. ಗುರುಭವನ ನಿರ್ಮಿಸಲು ಸೂಕ್ತವಾದ ಸ್ಥಳ/ನಿವೇಶನ ಗುರ್ತಿಸಿಕೊಳ್ಳಬೇಕು. ಇದು ಶಾಲಾ ಕಾಲೇಜುಗಳಿಗೆ ಸಂಬಂಧಿಸಿದಾದಲ್ಲಿ ಸಂಬಂಧಿಸಿದ ಇಲಾಖಾ ಮುಖ್ಯಸ್ಥರಿಗೆ ಅಗತ್ಯ ದಾಖಲೆಗಳನ್ನು ಲಗತ್ತಿಸಿ ಪ್ರಸ್ತಾವನೆ ಸಲ್ಲಿಸಿ ಗುರುಭವನ ನಿರ್ಮಿಸಲು ಅನುಮತಿ ಪಡೆಯಬೇಕು. ಇದು ಗುರುಭವನ ಸಮಿತಿಗೆ ಹಸ್ತಾಂತರ ಆಗಬೇಕು. ನಿವೇಶನ–ಶಾಲಾ– ಕಾಲೇಜುಗಳಿಗೆ ಸಂಬಂಧಿಸಿಲ್ಲದ ಪ್ರಕರಣಗಳಲ್ಲಿ ಸಂಬಂಧಿಸಿದ ಸರ್ಕಾರದ ಇಲಾಖೆ ಅಥವಾ ಸರ್ಕಾರದಿಂದ ಗುರುಭವನ ನಿರ್ಮಾಣಕ್ಕಾಗಿ ಮಂಜೂರಾತಿ ಪಡೆಯಬೇಕು. ಅಥವಾ ಸ್ಥಳೀಯ ಪ್ರಾಧಿಕಾರಿಗಳಾದ ಮಹಾನಗರಪಾಲಿಕೆ, ನಗರಸಭೆ, ಪುರಸಭೆಗಳ ಪಟ್ಟಣ ಪಂಚಾಯಿತಿಗಳ ವ್ಯಾಪ್ತಿಯ ಜಮೀನು ಆದಲ್ಲಿ ಅವರಿಂದ ಮಂಜೂರಾತಿ ಆಗಬೇಕು.
4. ನಂತರ ಲೋಕೋಪಯೋಗಿ ಇಲಾಖೆ, ಪಂಚಾಯತ್ ರಾಜ್ ಇಂಜನಿಯರಿಂಗ್ ವಿಭಾಗ, ಕರ್ನಾಟಕ ರಾಜ್ಯ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್(ಕೆ.ಆರ್.ಐ.ಡಿ.ಎಲ್) ನಿರ್ಮಿತಿ ಕೇಂದ್ರ ಅಥವಾ ಇತರೆ ಅಧಿಕೃತ ತಾಂತ್ರಿಕ ಪರಿಣಿತರನ್ನು ಸಂಪರ್ಕಿಸಿ, ಅವರಿಗೆ ನಿವೇಶನದ ವಿವರ, ನಿರ್ಮಿಸಬೇಕಾದ ಗುರುಭವನದ ಅಳತೆ ವಿವರ ನೀಡಿ, ನೀಲಿ ನಕ್ಷೆ ಮತ್ತು ಅಂದಾಜು ವೆಚ್ಚ ತಯಾರಿಸಿಕೊಂಡು ಅದಕ್ಕೆ ಅವರಿಂದ ದೃಢೀಕರಣ ಪಡೆಯಬೇಕು.
5. ಗುರುಭವನ ನಿರ್ಮಾಣಕ್ಕೆ ಸಿದ್ಧಪಡಿಸಿದ ಅಂದಾಜು ಪಟ್ಟಿಯಂತೆ ಒಟ್ಟು ಅಂದಾಜು ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯು ಸೇರಿದಂತೆ ಯಾವ ಯಾವ ಮೂಲಗಳಿಂದ ಎಷ್ಟೆಷ್ಟು ಸಂಗ್ರಹಿಸಲಾಗುತ್ತದೆ ಎಂಬ ವಿವರಗಳನ್ನು ಸಿದ್ಧಪಡಿಸಬೇಕು. ಆ ಮೂಲಗಳಿಗೆ ಪತ್ರ ವ್ಯವಹಾರ ನಡೆಸಿ ಒಪ್ಪಿಗೆ ಪತ್ರ ಪಡೆಯಬೇಕು.

   ಉದಾ: ಮಾನ್ಯ ವಿಧಾನ ಸಭಾ ಸದಸ್ಯರು, ವಿಧಾನ ಪರಿಷತ್ ಸದಸ್ಯರು, ಲೋಕಸಭಾ ಸದಸ್ಯರು ಹಾಗು ಕೇಂದ್ರ/ರಾಜ್ಯ ಸರ್ಕಾರಗಳ ಸಚಿವರುಗಳ ಕ್ಷೇತ್ರಾಭಿವೃದ್ಧಿ ನಿಧಿಗಳಿಂದ ಅನುದಾನ ಪಡೆಯುವುದಾದಲ್ಲಿ ಅವರಿಂದ ಲಿಖಿತ ಒಪ್ಪಿಗೆ ಪತ್ರಗಳನ್ನು ಪಡೆಯಬೇಕು.

   ಸ್ಥಳೀಯ ದಾನಿಗಳಿಂದ ಅನುದಾನ ಪಡೆದಲ್ಲಿ ಅವರಿಂದ ಒಪ್ಪಿಗೆ ಪತ್ರ ಪಡೆಯಬೇಕು. ಶಿಕ್ಷಕರಿಂದ ವಂತಿಗೆ ಪಡೆಯುವುದಾದಲ್ಲಿ ಈ ಬಗ್ಗೆ ಗುರುಭವನ ಸಮಿತಿ, ಜಿಲ್ಲಾ/ತಾಲ್ಲೂಕ್ ಶಿಕ್ಷಕರ ಸಂಘಧ ಕಾರ್ಯಕಾರಿ ಸಮಿತಿಗಳಲ್ಲಿ ನಿರ್ಣಯ ಮಾಡಿ, ಸ್ವಯಿಚ್ಛೆ <u>ವಂತಿಗೆ ನೀಡುವ ಪ್ರತಿ ಶಿಕ್ಷಕರಿಂದ ಲಿಖಿತ ಒಪ್ಪಿಗೆ ಪಡೆದುಕೊಂಡು,</u> ಅವರಿಂದ ವಂತಿಗೆಯನ್ನು ಸಂಗ್ರಹಿಸಬೇಕು. ಇದು ಶಿಕ್ಷಕರ ವೈಯಕ್ತಿಕ ಇಚ್ಛೆ ಆಗಬೇಕು. ಒತ್ತಾಯ ಪೂರ್ವಕ ವಸೂಲಿ ಆಗಬಾರದು. ಈ ಎಲ್ಲಾ ಮೂಲಗಳಿಂದಲೂ ಅನುದಾನ, ಡಿ.ಡಿ/ಚೆಕ್ ರೂಪದಲ್ಲಿ ಪಡೆದು ಗುರುಭವನ ಸಮಿತಿಯ ಹೆಸರಿನಲ್ಲಿನ ಬ್ಯಾಂಕ್ ಖಾತೆಗೆ ಜಮಾ ಆಗಬೇಕು.
6. ಇದಾದ ನಂತರ ನಿವೇಶನದ ದಾಖಲೆ, ನೀಲನಕ್ಷೆ, ಅಂದಾಜು ವೆಚ್ಚಗಳನ್ನು ಲಗತ್ತಿಸಿ, ಸ್ಥಳೀಯ ಪ್ರಾಧಿಕಾರ (ಮಹಾನಗರಪಾಲಿಕೆ, ನಗರಸಭೆ, ಪುರಸಭೆ, ಪಟ್ಟಣ ಮತ್ತು ಪಂಚಾಯಿತಿ) ಗಳಿಗೆ ಸಲ್ಲಿಸಿ ಅನುಮತಿ (ಲೈಸನ್ಸ್) ಪಡೆಯಬೇಕು.
7. ನಿವೇಶನ ದಾಖಲೆ, ನೀಲನಕ್ಷೆ, ಅಂದಾಜು ವೆಚ್ಚ, ಸ್ಥಳೀಯ ಪ್ರಾಧಿಕಾರದಿಂದ ಲೈಸನ್ಸ್ ಪ್ರತಿಗಳನ್ನು ಲಗತ್ತಿಸಿ, ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯ ಕಾರ್ಯದರ್ಶಿ/ ಖಜಾಂಚಿಗಳಿಗೆ ಪ್ರಸ್ತಾವನೆ ಸಲ್ಲಿಸಿ, ಆಡಳಿತಾತ್ಮಕ ಅನುಮೋದನೆ ಪಡೆಯಬೇಕು.

(9)

8. ಆಡಳಿತಾತ್ಮಕ ಅನುಮೋದನೆ ಪಡೆದ ನಂತರ ಕಟ್ಟಡ ನಿರ್ಮಾಣ ತಾಂತ್ರಿಕ ಪರಿಣಿತಿ ಇರುವ ಅಧಿಕೃತ ಸಂಸ್ಥೆ ಅಥವ ಪರಿಣಿತಿ ಹೊಂದಿದ ಅರ್ಹ ವ್ಯಕ್ತಿಯಿಂದ ಸಲಹೆ ಪಡೆದು ರಾಜ್ಯ ಸರ್ಕಾರ ಕಾಲಕಾಲಕ್ಕೆ ನಿಗದಿಪಡಿಸಿದ ಪಾರದರ್ಶಕ ನಿಯಮವನ್ನು ಅನುಸರಿಸಿ ಟೆಂಡರ್ ಕರೆಯಬೇಕು. ಇಲ್ಲವಾದಲ್ಲಿ ಸರ್ಕಾರಿ ಸ್ವಾಮ್ಯದ ನಿರ್ಮಾಣ ಏಜೆನ್ಸಿಗಳಾದ ಪಿ.ಡಬ್ಲ್ಯೂ.ಡಿ, ಪಿ.ಆರ್.ಇ.ಡಿ, ಕೆ.ಆರ್.ಐ.ಡಿ.ಎಲ್ ನಿರ್ಮಿತಿ ಕೇಂದ್ರ ಮುಂತಾದವರಿಗೆ ಸಮಿತಿಯ ಪೂರ್ಣ ಕೋರಂ ನಿರ್ಣಯದೊಂದಿಗೆ ನಿರ್ಣಯ ತೆಗೆದುಕೊಂಡ ನಂತರವೇ ಒಂದು ಲಿಖಿತ ಆದೇಶದ ರೂಪದಲ್ಲಿ ನಿರ್ಮಾಣ ಕಾರ್ಯವನ್ನು ವಹಿಸತಕ್ಕದ್ದು. ನೇರವಾಗಿ ಶಿಕ್ಷಕರಿಗಾಗಲಿ, ಅನಧಿಕೃತ ಖಾಸಗಿ ವ್ಯಕ್ತಿಗಳಿಗಾಗಲಿ ನಿರ್ಮಾಣ ಕಾರ್ಯ ವಹಿಸುವಂತಿಲ್ಲ.

9. ನಿರ್ಮಾಣ ಕಾರ್ಯ ಪ್ರಾರಂಭಕ್ಕೆ ಮೊದಲು ಈ ಪತ್ರಕ್ಕೆ ಲಗತ್ತಿಸಿದ ನಮೂನೆಯಂತೆ ರೂ. 500/- ಮೌಲ್ಯದ ಛಾಪಾ ಕಾಗದಲ್ಲಿ ಗುರುಭವನ ಸಮಿತಿಯ ಅಧ್ಯಕ್ಷರು ಮತ್ತು ನಿರ್ಮಾಣ ಏಜೆನ್ಸಿಯ ಅಧಿಕೃತ ಪ್ರತಿನಿಧಿಯೊಂದಿಗೆ ಪರಸ್ಪರ ಲಿಖಿತ ಒಪ್ಪಂದ ಮಾಡಿಕೊಳ್ಳಬೇಕು. ಇದರಲ್ಲಿ ನಿರ್ಮಾಣದ ನಿರ್ದಿಷ್ಟಗಳು ಹಾಗು ಕಾಮಗಾರಿ ಮುಗಿಸುವ ಕಾಲಮಿತಿಯನ್ನು ಸ್ಪಷ್ಟಪಡಿಸಬೇಕು.

10. ನಿರ್ಮಾಣ ಏಜೆನ್ಸಿಗೆ ನಿರ್ಮಾಣದ ಕಾರ್ಯವನ್ನು ವಹಿಸುವ ಆದೇಶಕ್ಕೆ ಜಿಲ್ಲಾ ಹಂತದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು(ಆಡಳಿತ) ಮತ್ತು ತಾಲ್ಲೂಕು ಹಂತದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಹಿ ಮಾಡಬೇಕು.

11. ಈ ಆದೇಶದಲ್ಲಿ ಗುರುಭವನ ನಿರ್ಮಾಣಕ್ಕೆ ಅಧಿಕೃತವಾಗಿ ನಿಗದಿಯಾದ ನಿವೇಶನವನ್ನು ನಿರ್ಮಾಣ ಏಜೆನ್ಸಿಗೆ ನಿರ್ಮಾಣ ಕಾರ್ಯಕ್ಕಾಗಿ ತಾತ್ಕಾಲಿಕವಾಗಿ ಹಸ್ತಾಂತರ ಮಾಡಬೇಕು.

12. ನಿರ್ಮಾಣ ಏಜೆನ್ಸಿಗೆ ಅಂದಾಜು ಮೊತ್ತದ ಶೇ.25 ರಷ್ಟನ್ನು ಮುಂಗಡವಾಗಿ ನೀಡಬಹುದು. ನಂತರ ಹಂತಹಂತವಾಗಿ ಕಾರ್ಯ ಪ್ರಗತಿ ಅನುಸರಿಸಿ ನೀಡಲಾಗುವುದು ಎಂಬುದನ್ನು ಪರಸ್ಪರ ಒಪ್ಪಂದದಲ್ಲಿ ಕಡ್ಡಾಯವಾಗಿ ಪ್ರಸ್ತಾಪಿಸಬೇಕು.

13. ನಿರ್ಮಾಣ ಕಾರ್ಯದ ಪ್ರಾರಂಭ ಹಾಗು ಮುಕ್ತಾಯಕ್ಕೆ ನಿರ್ಧಿಷ್ಟವಾದ ಸಮಯ ನಿಗದಿ ಮಾಡಬೇಕು. ಒಟ್ಟಾರೆ ನಿರ್ಮಾಣ ಕಾರ್ಯ ಗರಿಷ್ಠ 1 ವರ್ಷದ ಅವಧಿಯಲ್ಲಿ ಮುಗಿಸಬೇಕು. ನಿರ್ಮಾಣ ಏಜೆನ್ಸಿಯು ನಿಗದಿಪಡಿಸಿದ ಅವದಿಯಲ್ಲಿ ಕೆಲಸ ಪೂರೈಸದಿದ್ದಲ್ಲಿ ವಿಳಂಬಕ್ಕೆ ನಿಯಮಾನುಸಾರ ಇಂತಿಷ್ಟು ದಂಡ ವಿಧಿಸುವ ಹಾಗು ನಿರ್ಮಾಣ ಕಾರ್ಯ ಕಾಲಮಿತಿಯಲ್ಲಿ ಆಗಿ, ಸಮಿತಿಯು ಹಣಪಾವತಿ ವಿಳಂಬ ಮಾಡಿದಲ್ಲಿ, ವಿಳಂಬಕ್ಕೆ ಅನುಗುಣವಾಗಿ ಒಂದಿಷ್ಟು ದಂಡ ವಿಧಿಸುವ ಬಗ್ಗೆ ಪರಸ್ಪರ ಒಪ್ಪಂದದಲ್ಲಿ ನಿರ್ಧಿಷ್ಟಪಡಿಸಬೇಕು.

14. ನಿರ್ಮಾಣ ಕಾರ್ಯವನ್ನು ಟೆಂಡರ್ ಮುಖಾಂತರ ಖಾಸಗಿ ವ್ಯಕ್ತಿಗೆ ವಹಿಸಬೇಕಾದ ಸಂದರ್ಭದಲ್ಲಿ ಅವರು ಲೋಕೋಪಯೋಗಿ ಇಲಾಖೆಯಿಂದ ಅಧಿಕೃತ ಪರವಾನಿಗೆ ಪಡೆದಿರುವ ಕ್ಲಾಸ್-1 ಕಂಟ್ರಾಕ್ಟರ್ ಎಂಬುದನ್ನು ದೃಢಪಡಿಸಿಕೊಳ್ಳಬೇಕು. ಅವರಿಗೆ ಕಟ್ಟಡ ನಿರ್ಮಾಣದಲ್ಲಿ ಸಾಕಷ್ಟು ಅನುಭವ ಇದೆ, ಹಾಗು ಉತ್ತಮ ಗುಣಮಟ್ಟದ ಕಟ್ಟಡಗಳನ್ನು ನಿರ್ಮಿಸಿದ್ದಾರೆ ಎಂಬುದನ್ನು ಸಮಿತಿಯ ಸದಸ್ಯರು ಪರಿಶೀಲನೆಯಿಂದ ದೃಢಪಡಿಸಿಕೊಂಡು ಅವರ ನಿರ್ಮಾಣ ಸಾಮರ್ಥ್ಯ, ಆರ್ಥಿಕ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ನಿರ್ಮಾಣ ಕಾರ್ಯಕ್ಕೆ ಅಂತಿಮ ಆಯ್ಕೆ ಮಾಡಿ ಆದೇಶ ನೀಡಬೇಕು.

15. ಗುರುಭವನ ನಿರ್ಮಾಣ, ನಿರ್ವಹಣೆಗೆ ಸಂಬಂಧಿಸಿದಂತೆ, ಜಿಲ್ಲಾ ಗುರುಭವನ ಆದಲ್ಲಿ ಉಪನಿರ್ದೇಶಕರು(ಆಡಳಿತ) ರವರ ಕಛೇರಿಯಲ್ಲಿ ಮತ್ತು ತಾಲ್ಲೂಕು ಗುರುಭವನ ಆದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಕಡತ ತೆರೆದು, ಇದರ ನಿರ್ವಹಣೆಯನ್ನು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯ ಜವಾಬ್ದಾರಿ ಇರುವ ಪ್ರಥಮ ದರ್ಜೆ ಸಹಾಯಕರಿಗೆ ವಹಿಸಬೇಕು. ಈ ಕಡತ ಹಾಗು ಬ್ಯಾಂಕ್ ಖಾತೆ ನಿರ್ವಹಣೆ, ಕಛೇರಿ ಕೈಪಿಡಿ ನಿಯಮದಂತೆ, ನಿರ್ವಹಣೆ ಆಗಬೇಕು. ಇದು ಉಪನಿರ್ದೇಶಕರು ಹಾಗು ಕ್ಷೇತ್ರ ಶಿಕ್ಷಣಾಧಿಕಾರಿಗಳ ಜವಾಬ್ದಾರಿಯಾಗಿರುತ್ತದೆ.

16. ಗುರುಭವನ ನಿರ್ಮಾಣ ನಿರ್ವಹಣೆಗೆ ಸಂಬಂಧಿಸಿದಂತೆ, ಒಂದು ನಗದು ಪುಸ್ತಕ ಸರ್ಕಾರಿ ಕಚೇರಿ ನಿಯಮದಂತೆ ನಿರ್ವಹಿಸಬೇಕು. ಇದರಲ್ಲಿ ಪ್ರತಿಯೊಂದು ಜಮಾ-ಖರ್ಚನ್ನು ಆಗಿಂದಾಗ್ಗೆ ದಾಖಲಿಸಿ, ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳು ದೃಢೀಕರಿಸಬೇಕು. ಎಲ್ಲಾ ಕಾಲಕ್ಕೂ ಬ್ಯಾಂಕ್ ಬ್ಯಾಲೆನ್ಸ್ (ಪಾಸ್ ಪುಸ್ತಕ ಆಧರಿಸಿ) ಹಾಗು ನಗದು ಪುಸ್ತಕದ ದಾಖಲೆಗಳಿಗೆ ತಾಳೆ ಹೊಂದಬೇಕು.
17. ಗುರುಭವನ ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ, ಅನಧಿಕೃತವಾಗಿ ಯಾವುದೇ ದಾಖಲೆ ಇಲ್ಲದೆ ವ್ಯವಹಾರ ನಡೆಸಬಾರದು. ಪ್ರತಿಯೊಂದು ವ್ಯವಹಾರಕ್ಕೂ ಸಮಿತಿಯ ಸಭಾ ನಡಾವಳಿ ಆಧರಿಸಿ, ಕಡತದಲ್ಲಿ ದಾಖಲೆ ಆಗಿರತಕ್ಕದ್ದು.
18. ಶಾಲಾ ಕಾಲೇಜುಗಳ ಆವರಣದಲ್ಲಿ ಗುರುಭವನ ನಿರ್ಮಾಣ ಮಾಡುವುದಾದಲ್ಲಿ, ಆಯಾ ಇಲಾಖಾ ಮುಖ್ಯಸ್ಥರಿಂದ ನಿವೇಶನ ಮಂಜೂರಾತಿ ಅನುಮತಿ ಪಡೆಯುವುದರ ಜೊತೆಗೆ ಆಯಾ ಶಾಲೆಯ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಯ ಒಪ್ಪಿಗೆ ನಿರ್ಣಯವನ್ನು ಪಡೆಯಬೇಕು.
19. ನಿರ್ಮಾಣ ಕಾರ್ಯ ಮುಗಿದ ನಂತರ-ನಿರ್ಮಾಣ ಕಾರ್ಯವು ಪೂರ್ವ ನಿಗದಿಪಡಿಸಿದ ನೀಲನಕ್ಷೆ, ಅಂದಾಜು, ಗುಣಮಟ್ಟದಂತೆ ಎಲ್ಲಾ ಕೆಲಸಗಳೂ ಆಗಿರುವುದನ್ನು ಹಾಗು ಟೆಂಡರ್/ಪರಸ್ಪರ ಒಪ್ಪಂದದಲ್ಲಿ ಪ್ರಸ್ತಾಪಿಸಿದ ಎಲ್ಲಾ ನಿಬಂಧನೆಗಳು ಪೂರೈಸಿರುವುದನ್ನು ಪಿ.ಡಬ್ಲ್ಯೂಡಿ, ಪಿ.ಆರ್.ಇ.ಡಿ, ಕೆ.ಆರ್.ಐ.ಡಿ.ಎಲ್ ಅಥವಾ ನಿರ್ಮಿತಿ ಕೇಂದ್ರದ ಒಬ್ಬರು ಅಭಿಯಂತರರಿಂದ ದೃಢೀಕರಿಸಿಕೊಳ್ಳಬೇಕು. ಆನಂತರವೇ ಕಟ್ಟಡವನ್ನು ಹಸ್ತಾಂತರ ಮಾಡಿಕೊಳ್ಳಬೇಕು.
20. ನಿಗದಿಪಡಿಸಿದ ನಿರ್ದಿಷ್ಟಗಳು ಹಾಗು ಗುಣಮಟ್ಟದಲ್ಲಿ ನಿರ್ಮಾಣ ಕಾರ್ಯ ಆಗುತ್ತಿರುವುದನ್ನು ಸೂಕ್ತವಾದ ತಾಂತ್ರಿಕ ಸಲಹೆ ಪಡೆದುಕೊಂಡು ಪ್ರತಿ ಹಂತದಲ್ಲೂ (ಪಾಯ, ಕಾಲಂ, ಲಿಂಟಲ್, ಗೋಡೆ, ಕಿಟಕಿ, ಬಾಗಿಲು, ರೂಫಿಂಗ್, ಪ್ಲಾಸ್ಟರಿಂಗ್, ನೀರು ಮತ್ತು ಸ್ಯಾನಿಟರಿ ಲೈನ್ ಅಳವಡಿಕೆ, ಫ್ಲೋರಿಂಗ್, ಪೈಂಟಿಂಗ್ ಇತ್ಯಾದಿ) ಆಗಿಂದಾಗ್ಗೆ ಮೇಲ್ವಿಚಾರಣೆ ಮಾಡಿ ಕಾಮಗಾರಿಯು ಗುಣಮಟ್ಟದಲ್ಲಿ ಆಗುತ್ತಿರುವುದನ್ನು ಖಾತರಿಪಡಿಸಿಕೊಳ್ಳಬೇಕು. ಇದು ಗುರುಭವನ ಸಮಿತಿಯ ಜವಾಬ್ದಾರಿ.

## ಗುರುಭವನ ನಿರ್ಮಾಣವಾದ ನಂತರ ನಿರ್ವಹಣೆಗೆ ಮಾರ್ಗಸೂಚಿ:

1. ಗುರುಭವನ ನಿರ್ಮಾಣ, ನಿರ್ವಹಣೆ, ಸಂರಕ್ಷಣೆಯ ಪೂರ್ಣ ಜವಾಬ್ದಾರಿ ಗುರುಭವನ ಸಮಿತಿಯದ್ದು.
2. ಗುರುಭವನವು ಶಿಕ್ಷಕರು-ವಿದ್ಯಾರ್ಥಿಗಳ ಶೈಕ್ಷಣಿಕ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿರತಕ್ಕದ್ದು.
3. ಯಾವುದೇ ಶೈಕ್ಷಣಿಕ ಚಟುವಟಿಕೆಗಳು ಇಲ್ಲದ ಸಂದರ್ಭದಲ್ಲಿ ಮಾತ್ರ ಇತರೆ ಬಾಬುಗಳಿಗೆ ಬಾಡಿಗೆಗೆ ನೀಡಬೇಕು.
4. ಬಾಡಿಗೆಗೆ ನೀಡುವಾಗ ಸಮಿತಿ ನಿರ್ಣಯಿಸಿ, ನಿರ್ವಹಣಾ ವೆಚ್ಚ ನಿಗದಿಪಡಿಸಿ ನೀಡತಕ್ಕದ್ದು.
5. ಪ್ರತಿ ಸಾರಿ ನೀಡುವಾಗಲು, ಸಂಬಂಧಿಸಿದವರಿಂದ ಮುಂಗಡವಾಗಿ ಹಣ ಪಡೆದು ಕಾಯ್ದಿರಿಸಬೇಕು. ಅಧಿಕೃತವಾಗಿ ರಸೀದಿ / ಸ್ವೀಕೃತಿ ನೀಡಬೇಕು.
6. ವಿವಾದಾತ್ಮಕ ಸಭೆ ಸಮಾರಂಭಗಳಿಗೆ ಗುರುಭವನ ಬಾಡಿಗೆಗೆ ನೀಡಬಾರದು.
7. ಶಾಲೆ/ಕಾಲೇಜಿಗೆ ರಜೆ ಇರುವಾಗ ಮಾತ್ರ ಇತರೆ ಸಭೆ ಸಮಾರಂಭಗಳಿಗೆ ನೀಡತಕ್ಕದ್ದು.
8. ಗುರುಭವನ ನಿರ್ವಹಣೆಯಿಂದ ಆವರಣದಲ್ಲಿಯ ಶಾಲೆಗಳ ದೈನಂದಿನ ಕೆಲಸ ಕಾರ್ಯಗಳಿಗೆ ಯಾವುದೇ ರೀತಿಯ ಅಡಚಣೆ ಆಗಬಾರದು. ಈ ಬಗ್ಗೆ ಸಮಿತಿ ಬಹಳ ಎಚ್ಚರ ವಹಿಸಬೇಕು.
9. ಗುರುಭವನ ಸಮಿತಿಯ ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಕಡ್ಡಾಯವಾಗಿ ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ, ಗುರುಭವನದ ಆಗು-ಹೋಗುಗಳಿಗೆ ತಿಂಗಳಲ್ಲಿ ಬಾಡಿಗೆ ಮುಖಾಂತರ ಸಂಗ್ರಹವಾದ ಮೊತ್ತದಿಂದ ವಿದ್ಯುತ್ ಶುಲ್ಕ, ನೀರಿನ ಶುಲ್ಕ, ಸ್ಥಳೀಯ ತೆರಿಗೆಗಳು ಇತ್ಯಾದಿಗಳನ್ನು ಪಾವತಿಸಿದ ಬಗ್ಗೆ ಹಾಗು ಇತರೆ ವಿಷಯಗಳ ಬಗ್ಗೆ ಚರ್ಚಿಸಬೇಕು. ಹಾಗು ಒಂದು ಶಾಶ್ವತ ನಡಾವಳಿ ಪುಸ್ತಕದಲ್ಲಿ, ನಡಾವಳಿ ದಾಖಲಿಸಿ ಹಾಜರಿದ್ದ ಸದಸ್ಯರ ಸಹಿ ಪಡೆಯಬೇಕು.

(6)

10. ಗುರುಭವನಕ್ಕೆ ಸಂಬಂಧಿಸಿದ ದಾಖಲೆ/ಕಡತಗಳನ್ನು ಉಪನಿರ್ದೇಶಕರ ಕಛೇರಿ/ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಶಿಕ್ಷಕರ ಕಲ್ಯಾಣ ನಿಧಿ ಜವಾಬ್ದಾರಿ ನಿರ್ವಹಿಸುವ ವಿಷಯ ನಿರ್ವಾಹಕರಿಗೆ ನೀಡಬೇಕು. ಇವರು ಇದನ್ನು ಗುರುಭವನದಲ್ಲಿ ಒಂದು ಕೊಠಡಿಯಲ್ಲಿ ಸಮಿತಿ ಒದಗಿಸುವ ಅಲ್ಮೇರಾದಲ್ಲಿ ಇಟ್ಟುಕೊಳ್ಳಬೇಕು. ಕಾಲಕಾಲಕ್ಕೆ ಕಡತ-ಕಾಗದ ಪತ್ರಗಳನ್ನು ಕಛೇರಿ ಕೈಪಿಡಿ ನಿಯಮದಂತೆ ನಿರ್ವಹಿಸಬೇಕು. ಇವರು ಸಮಿತಿಯ ಸಭೆಯಲ್ಲಿ ಹಾಜರಿದ್ದು ನಡಾವಳಿ ಬರೆದುಕೊಳ್ಳಬೇಕು.

11. ಪ್ರತಿ ಸಾರಿ ಬಾಡಿಗೆಗೆ ನೀಡಬೇಕಾದರೂ, ಸಂಬಂದಿಸಿದವರಿಂದ ಮುಂಗಡ ಪಡೆದು ಅಧಿಕೃತವಾಗಿ ರಸೀದಿ/ಸ್ವೀಕೃತಿ ನೀಡಿ, ಸಮಿತಿಯ ಬ್ಯಾಂಕ್ ಖಾತೆಗೆ ಜಮಾ ಮಾಡಬೇಕು.

12. ಸಮಿತಿಯ ಬ್ಯಾಂಕ್ ಖಾತೆ ನಿರ್ವಹಣೆಗೆ ಸಂಬಂಧಿಸಿದಂತೆ ಪ್ರತಿ ಜಮಾ-ಖರ್ಚು ದಾಖಲಿಸಲು ಒಂದು ಉತ್ತಮವಾದ ನಗದು ಪುಸ್ತಕ ನಿರ್ವಹಣೆ ಆಗಬೇಕು. ಇದರಲ್ಲಿನ ಪ್ರತಿ ವ್ಯವಹಾರವನ್ನು (ಖರ್ಚು-ಜಮಾ) ಉಪನಿರ್ದೇಶಕರು/ ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಹಿ ಮಾಡಿ ದೃಢೀಕರಿಸಬೇಕು. – ಪ್ರತಿ ಬಾರಿ ಹಣ ಸೆಳೆಯುವಾಗ ಯಾರಿಗೆ ಎಷ್ಟು ಮೊತ್ತ, ಏಕೆ, ಚೆಕ್ ನಂಬರ್, ದಿನಾಂಕಗಳನ್ನು ನಮೂದಿಸಿ, ವಿಷಯ ನಿರ್ವಾಹಕರು, ಸಮಿತಿಯ ಕಾರ್ಯದರ್ಶಿಗಳಿಗೆ ಮಂಡಿಸಿ, ಕಾರ್ಯದರ್ಶಿಗಳು ಖಜಾಂಚಿಗಳಿಗೆ ಮಂಡಿಸಿ, ಖಜಾಂಚಿಗಳು ಕಡತದಲ್ಲಿ ಟಿಪ್ಪಣಿ ಬರೆದು ಚೆಕ್‌ಗೆ ಸಹಿ ಮಾಡಿ ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಮಂಡಿಸಿ, ಸಹಿ ಮಾಡಲು ಟಿಪ್ಪಣಿಯಲ್ಲಿ ಷರಾ ದಾಖಲಿಸಿದ ನಂತರ ಸಹಿ ಮಾಡಬೇಕು.

13. ಈ ರೀತಿ ಚೆಕ್ ಹಾಳೆ ಖರ್ಚಾದ ಬಗ್ಗೆ ಉಳಿಕೆ ಚೆಕ್‌ಗಳ ವಿವರ-ಪ್ರತ್ಯೇಕ ವಹಿಯಲ್ಲಿ ದಾಖಲಿಸಬೇಕು. (ಚೆಕ್ ಬುಕ್ ಅಕೌಂಟ್) ಇದನ್ನು ಅಧ್ಯಕ್ಷರು ದೃಢೀಕರಿಸಬೇಕು.

14. ಗುರುಭವನದಲ್ಲಿ ಕಾಗದ ಪತ್ರಗಳ ರವಾನೆ / ಸ್ವೀಕೃತಿಗೆ ಗೆ ಮತ್ತು ಇಂದ ಟಪಾಲು ಪುಸ್ತಕ ನಿರ್ವಹಿಸಬೇಕು.

15. ಚೆಕ್ ವಿತರಿಸಿದ / ರವಾನಿಸಿದ ಬಗ್ಗೆ ಸೂಕ್ತ ದಾಖಲೆಗಳು ಸ್ವೀಕೃತಿಗಳನ್ನು ಅಧಿಕೃತವಾಗಿ ನಿರ್ವಹಿಸಬೇಕು.

16. ಗುರುಭವನ ಕಛೇರಿ ನಿರ್ವಹಣೆಯ ಜವಾಬ್ದಾರಿ ವಹಿಸಿದ ಉಪನಿರ್ದೇಶಕರ ಕಛೇರಿ/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ವಿಷಯ ನಿರ್ವಾಹಕರಿಗೆ ಗುರುಭವನ ಬಾಡಿಗೆಯಿಂದ ಬಂದ ಆದಾಯದಲ್ಲಿ, ಮಾಹೆಯಾನ ಒಂದಿಷ್ಟು ಸಂಭಾವನೆ ನಿಗದಿಪಡಿಸಿ ನೀಡಬೇಕು.

17. ಗುರುಭವನ ಸ್ವಚ್ಛತೆ, ಬಾಗಿಲು ತೆರೆಯುವುದು-ಹಾಕುವುದು ಮುಂತಾದ ಕೆಲಸಗಳನ್ನು ಉಪನಿರ್ದೇಶಕರು/ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಒಬ್ಬರು ಗ್ರೂಪ್ "ಡಿ" ನೌಕರರಿಗೆ ವಹಿಸಬೇಕು. ಇವರಿಗೂ ಗುರುಭವನ ಆದಾಯದಲ್ಲಿ ಒಂದಿಷ್ಟು ಮಾಹೆಯಾನ ಸಂಭಾವನೆ ನಿಗದಿಪಡಿಸಿ ನೀಡಬೇಕು.

18. ಸಭೆ/ಸಮಾರಂಭಗಳಿದ್ದು, ಹೆಚ್ಚುವರಿ ಸ್ವಚ್ಛತೆ ನಿರ್ವಹಣೆ ಇದ್ದಲ್ಲಿ ದಿನಗೂಲಿ ರೂಪದಲ್ಲಿ ನೇಮಿಸಿಕೊಂಡು ನಿರ್ವಹಿಸುವುದು.

19. ಶಿಕ್ಷಣ ಇಲಾಖೆಯ ಕಾರ್ಯಕ್ರಮ ಸಭೆ-ಸಮಾರಂಭಗಳಿಗೆ ಉಚಿತವಾಗಿ ನೀಡಬೇಕು. ಯಾವುದೇ ಬಾಡಿಗೆ ತೆಗೆದುಕೊಳ್ಳಬಾರದು. ಆದರೆ ಅವಕಾಶವಿದ್ದಲ್ಲಿ ವಿದ್ಯುತ್ ಶುಲ್ಕ, ನೀರು, ಸ್ವಚ್ಛತಾ ಶುಲ್ಕ ಪಡೆದುಕೊಳ್ಳಬಹುದು.

20. ಪ್ರತಿ ವರ್ಷ ಮಾರ್ಚ್ 31 ರಲ್ಲಿದ್ದಂತೆ ಗುರುಭವನದ ವಾರ್ಷಿಕ ಆದಾಯ, ಖರ್ಚಿನ ವಿವರಗಳನ್ನು ರಿಜಿಸ್ಟರ್ಡ್ ಚಾರ್ಟೆಡ್ ಅಕೌಂಟೆಂಟ್ ರವರಿಂದ ಆಡಿಟ್ ಮಾಡಿಸಿ, ಆಡಿಟ್ ವರದಿಗೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗು ಆಡಿಟರ್ ರವರು ದೃಢೀಕರಿಸಿ, ಅದರ ಒಂದು ಪ್ರತಿಯನ್ನು ಕಾರ್ಯದರ್ಶಿ/ಖಜಾಂಚಿಗಳು ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಬೆಂಗಳೂರು ರವರಿಗೆ ಏಪ್ರಿಲ್ 30 ರೊಳಗೆ ತಪ್ಪದೆ ಸಲ್ಲಿಸಬೇಕು.

21. ಸಮಿತಿಗಳು ತಮ್ಮ ಆದಾಯದ ಹಣದಲ್ಲಿ ಗುರುಭವನಕ್ಕೆ ವೇದಿಕೆಗೆ ಪೀಠೋಪಕರಣ, ಸಭಿಕರಿಗೆ ಕುರ್ಚಿಗಳು, ದೀಪಾಲಂಕಾರ ಧ್ವನಿವರ್ಧಕಗಳನ್ನು ಕಂಪ್ಯೂಟರ್, ಜನರೇಟರ್ ಮುಂತಾದ ಸಲಕರಣೆಗಳನ್ನು ಖರೀದಿಸಿ, ಇವುಗಳಿಗೂ ಸೂಕ್ತ ಬಾಡಿಗೆ ಪಡೆಯಬಹುದು.

22. ವರ್ಷಕ್ಕೆ ಒಂದು ಬಾರಿ ಸುಣ್ಣ-ಬಣ್ಣ, ಮೈನರ್ ದುರಸ್ಥಿ ನಿರ್ವಹಣೆ ಮಾಡಿಸಬೇಕು. ಇದಕ್ಕೆ ಅಧಿಕೃತವಾಗಿ ನಡಾವಳಿ ದಾಖಲಿಸಿ ಖರ್ಚು ಭರಿಸಬೇಕು.

23. ಸಭೆ-ಸಮಾರಂಭಗಳಿಗೆ ಬಾಡಿಗೆಗೆ ನೀಡಿದಾಗ ಹೆಚ್ಚು ಜನರ ಬಳಕೆ ಆದಾಗ ಶೌಚಾಲಯಗಳ ನಿರ್ವಹಣೆಗೆ ದಿನಗೂಲಿ ಆಧಾರದಲ್ಲಿ ಒಬ್ಬರು ಸ್ಕ್ಯಾವೆಂಜರ್‌ನ್ನು ನೇಮಿಸಿಕೊಂಡು ಸಕಾಲಿಕ ಸ್ವಚ್ಛತಾ ಕಾರ್ಯ ಕೈಗೊಳ್ಳಬೇಕು.

24. ಗುರುಭವನ ಆವರಣದಲ್ಲಿ ಅನಗತ್ಯ-ಬಾಹ್ಯ-ಖಾಸಗಿ ವಾಹನಗಳ ನಿಲುಗಡೆಯನ್ನು ನಿಷೇದಿಸಿ, ಆವರಣ ಸ್ವಚ್ಛವಾಗಿ ಆಕರ್ಷಣೀಯವಾಗಿ, ಸಾಧ್ಯವಾದಲ್ಲಿ ಮರ, ಗಿಡ, ಕೈತೋಟ ಹೂವಿನ ಕುಂಡಗಳನ್ನು ನಿರ್ವಹಿಸಬಹುದು.

25. ಒಟ್ಟಾರೆ ಗುರುಭವನಗಳು ಶಿಕ್ಷಣ ಇಲಾಖೆಯ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಮಾದರಿ ಕೇಂದ್ರಗಳಾಗಿ ಇಲಾಖೆಯ ಪೂರಕ ಕಾರ್ಯಕ್ರಮಗಳಿಗೆ ಬಳಕೆಯಾಗಬೇಕು.

26. ಸಾರ್ವಜನಿಕ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳು ತಮ್ಮ ಇಲಾಖೆಯ ತಪಾಸಣೆ ಮತ್ತು ಇತರೆ ಕಾರ್ಯ ನಿಮಿತ್ತ ಜಿಲ್ಲೆಗಳಿಗೆ ಭೇಟಿ ನೀಡಿದಾಗ ಮತ್ತು ಜಿಲ್ಲಾ ಹಂತದ ಅಧಿಕಾರಿಗಳು ತಾಲ್ಲೂಕುಗಳಿಗೆ ಭೇಟಿ ನೀಡಿದಾಗ ಗುರುಭವನಗಳಿಗೆ ಭೇಟಿ ನೀಡಿ, ಅಲ್ಲಿನ ಸ್ವಚ್ಛತೆ, ನಿಯಮಿತ ಬಳಕೆ, ಕಡತ, ನಗದು ಪುಸ್ತಕ, ರಸೀದಿ ಪುಸ್ತಕ ಮತ್ತು ಇತರ ದಾಖಲೆಗಳನ್ನು ಪರಿಶೀಲಿಸಿ Visitors ಪುಸ್ತಕದಲ್ಲಿ ಪರಿಶೀಲನಾ ವರದಿ ಅಭಿಪ್ರಾಯಗಳನ್ನು ದಾಖಲಿಸಬೇಕು.

27. ಪ್ರತಿ ವರ್ಷ ಅತ್ಯಂತ ಉತ್ತಮವಾಗಿ ನಿರ್ವಹಣೆ ಮಾಡಿದ ರಾಜ್ಯದ ಒಂದು ಗುರುಭವನಕ್ಕೆ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಿಂದ ರೂ. 10,000/- ನಗದು ಬಹುಮಾನ ನೀಡಲಾಗುವುದು. ಇದನ್ನು ಗುರುಭವನ ಸುಧಾರಣೆಗಾಗಿ ಮಾತ್ರ ಬಳಸಬೇಕು.

28. ಪ್ರತಿ ವರ್ಷ ಶಿಕ್ಷಕರ ದಿನಾಚರಣೆ ಸಂದರ್ಭದಲ್ಲಿ ಗುರುಭವನಗಳಿಗೆ ದೀಪಾಲಂಕಾರ ಮಾಡಿಸಿ, ಶೋಭೆ ಬರುವಂತೆ ಮಾಡುವುದು. ಹಾಗು ಇದರ ಅಸ್ತಿತ್ವ ಹಾಗು ಉತ್ತಮ ನಿರ್ವಹಣೆಗೆ ಸಾರ್ವಜನಿಕರ ಗಮನ ಸೆಳೆಯುವುದು.

29. ಗುರುಭವನಗಳಲ್ಲಿ ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ, ಕರ್ನಾಟಕ ರಾಜ್ಯ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ, ಹಾಗೂ ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನಗಳಿಂದ ಶಿಕ್ಷಕರಿಗೆ ಹಾಗು ವಿದ್ಯಾರ್ಥಿಗಳಿಗೆ ದೊರೆಯುವ ವಿವಿಧ ಸೌಲಭ್ಯಗಳು-ಇವನ್ನು ಪಡೆಯಲು ಅರ್ಜಿ ಸಲ್ಲಿಸಲು ವಿಧಾನ, ಲಗತ್ತಿಸಬೇಕಾದ ದಾಖಲೆಗಳು, ವಿವರಗಳನ್ನಿಟ್ಟು-ಅಗತ್ಯ ಇರುವ ಶಿಕ್ಷಕರು-ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೆರವು ನೀಡಬೇಕು. ಸೌಲಭ್ಯಗಳ ಫಲಕಗಳನ್ನು ಪ್ರದರ್ಶಿಸುವುದು.

30. ಗುರುಭವನಗಳಲ್ಲಿ ಕೇವಲ ಸಭೆ-ಸಮಾರಂಭಗಳಲ್ಲದೆ ಶಿಕ್ಷಣ ವ್ಯವಸ್ಥೆ ಸುಧಾರಣೆಗೆ ಸಂಬಂಧಿಸಿದ ವಿವಿಧ ವಿಚಾರಗಳ ಬಗ್ಗೆ ಆಗಿಂದಾಗ್ಗೆ ತಜ್ಞರನ್ನು ಕರೆಸಿ, ವಿಚಾರ ಗೋಷ್ಠಿಗಳನ್ನು ನಡೆಸಬಹುದು. ಯಾವ ಸಂದರ್ಭದಲ್ಲಿ ಯಾರು ಭಾಗವಹಿಸಿದ್ದರು ಎಂಬ ಬಗ್ಗೆ ದಾಖಲೆಗಳನ್ನು ನಿರ್ವಹಿಸುವುದು.

ಈ ಮಾರ್ಗಸೂಚಿಯಲ್ಲಿ ಯಾವುದೇ ಉಲ್ಲಂಘನೆಯಾದಲ್ಲಿ ಜಿಲ್ಲಾ ಗುರುಭವನ ಆದಲ್ಲಿ ಉಪನಿರ್ದೇಶಕರು(ಆಡಳಿತ)ಹಾಗೂ ತಾಲ್ಲೂಕು ಗುರುಭವನ ಆದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಜವಾಬ್ದಾರಿ ಮಾಡಲಾಗುವುದು.

ಮೊಹಮ್ಮದ್ ಮೊಹಸಿನ್, ಭಾ.ಆ.ಸೇ.
ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ
ಹಾಗು ಕಾರ್ಯದರ್ಶಿ/ಖಜಾಂಚಿಗಳು ಕರ್ನಾಟಕ
ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ.

ಪ್ರತಿಯನ್ನು:

1. ಸರ್ಕಾರದ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ, ಬಹುಮಹಡಿಗಳ ಕಟ್ಟಡ, ಬೆಂಗಳೂರು–1 ಇವರಿಗೆ.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು ಇವರಿಗೆ.
3. ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷ ಅಭಿಯಾನ/ ರಾಜ್ಯ ಮಾಹಿತಿ ಶಿಕ್ಷಣ ಆಯೋಗ ಇವರಿಗೆ.
4. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ / ಗುಲ್ಬರ್ಗ ಇವರಿಗೆ.
5. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ನಿರ್ದೇಶಕರಿಗೆ.
6. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಸಹ ನಿರ್ದೇಶಕರಿಗೆ.
7. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಉಪ ನಿರ್ದೇಶಕರು(ಆಡಳಿತ) ರವರಿಗೆ.
8. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ.
9. ಅಧ್ಯಕ್ಷರು/ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
10. ಅಧ್ಯಕ್ಷರು/ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
11. ಅಧ್ಯಕ್ಷರು/ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
12. ಅಧ್ಯಕ್ಷರು/ಕಾರ್ಯದರ್ಶಿಗಳು, ಜಿಲ್ಲಾ ಹಂತದ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
13. ಅಧ್ಯಕ್ಷರು/ಕಾರ್ಯದರ್ಶಿಗಳು, ಜಿಲ್ಲಾ ಹಂತದ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
14. ಅಧ್ಯಕ್ಷರು/ಕಾರ್ಯದರ್ಶಿಗಳು, ಜಿಲ್ಲಾ ಹಂತದ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
15. ಅಧ್ಯಕ್ಷರು/ಕಾರ್ಯದರ್ಶಿಗಳು, ತಾಲ್ಲೂಕು ಹಂತದ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
16. ಅಧ್ಯಕ್ಷರು/ಕಾರ್ಯದರ್ಶಿಗಳು, ತಾಲ್ಲೂಕು ಹಂತದ ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
17. ಅಧ್ಯಕ್ಷರು/ಕಾರ್ಯದರ್ಶಿಗಳು, ತಾಲ್ಲೂಕು ಹಂತದ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
18. ಪ್ರಕಟಣೆಗಾಗಿ ಶಿಕ್ಷಣ ವಾರ್ತೆ ವಿಭಾಗ, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ. ಬೆಂಗಳೂರು ಇವರಿಗೆ.
19. ಕಛೇರಿ ಪ್ರತಿ.

ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ ಹಾಗೂ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿ ನಿಧಿ ಮತ್ತು
ರಾಷ್ಟ್ರೀಯ ಶಿಕ್ಷಕರ ಕಲ್ಯಾಣ ಪ್ರತಿಷ್ಠಾನ, ಶಿಕ್ಷಕರ ಸದನ, ಕೆ.ಜಿ.ರಸ್ತೆ, ಬೆಂಗಳೂರು-02.
ದೂರವಾಣಿ: 080-22483434 ಫ್ಯಾಕ್ಸ್: 080-22483860 ಇ-ಮೇಲ್: kstbf63@gmail.com

ಸಂಖ್ಯೆ: ಶಿ.ಕ.ನಿ/ಗು.ಭ.ಧ-ಪರಿಷ್ಕರಣೆ/01/2017-18

ದಿನಾಂಕ: 03-03-2018

## ಸುತ್ತೋಲೆ

ವಿಷಯ:- ಜಿಲ್ಲಾ ಮತ್ತು ತಾಲ್ಲೂಕ್ ಹಂತದಲ್ಲಿ ಗುರುಭವನಗಳ ನಿರ್ಮಾಣ ಮಾಡಲು ನಿಧಿಗಳಿಂದ ನೀಡುತ್ತಿರುವ ಧನ ಸಹಾಯವನ್ನು ಪರಿಷ್ಕರಿಸುವ ಬಗ್ಗೆ.

ಉಲ್ಲೇಖ:- 1. ಈ ಕಛೇರಿ ಸುತ್ತೋಲೆ ಸಂಖ್ಯೆ: ಎಫ್.1/ಗು.ಭ.ಅಪೂರ್ಣ.ಕಾ/ ಹೆ.ಅ.ಮಂ-01/2009-10 ದಿನಾಂಕ: 16-07-2009.

2. ಈ ಕಛೇರಿಯ ಸುತ್ತೋಲೆ ಸಂಖ್ಯೆ: ಶಿಕನಿ/ಆಡಳಿತ(1)ಗು.ಭ.ಇತರೆ 28(ಡಿ)/2013-14/ದಿನಾಂಕ: 03-10-2013.

3. ಈ ಕಛೇರಿಯ ಸುತ್ತೋಲೆ ಸಂಖ್ಯೆ: ಶಿ.ಕ.ನಿ.ಗು.ಭ.ಮಾ.ಸೂ.01/ 2014-15 ದಿನಾಂಕ: 11-09-2014.

4. ದಿನಾಂಕ: 01-02-2018 ರಂದು ನಡೆದ ನಿಧಿಗಳ ರಾಜ್ಯ ಸಮಿತಿ ಸಭೆಯ ನಿರ್ಣಯಗಳು.

** ** **

ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಿಸಲು ಅನುದಾನ ನೀಡುವುದರ ಮೂಲಕ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ವಿವಿಧ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಶಾಲೆಗಳ ಆವರಣದಲ್ಲಿ ಹೆಚ್ಚುವರಿಯಾಗಿರುವ ಖಾಲಿ ನಿವೇಶನಗಳಲ್ಲಿ ಅಥವಾ ದಾನಿಗಳಿಂದ ಪಡೆದ ನಿವೇಶನಗಳಲ್ಲಿ ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಗುರುಭವನಗಳನ್ನು ನಿರ್ಮಿಸಲಾಗುತ್ತಿರುವುದು ಸರಿಯಷ್ಟೆ. ಕರ್ನಾಟಕ ರಾಜ್ಯ ಶಿಕ್ಷಕರ ಕಲ್ಯಾಣ ನಿಧಿಯಿಂದ ನೀಡುವ ಅನುದಾನದ ಜೊತೆಗೆ ಉಳಿದ ಮೊತ್ತವನ್ನು ವಿಧಾನಸಭೆ, ವಿಧಾನ ಪರಿಷತ್ ಹಾಗೂ ಲೋಕಸಭಾ ಸದಸ್ಯರ ಕ್ಷೇತ್ರಾಭಿವೃದ್ಧಿ ನಿಧಿಯಿಂದ ಹಾಗೂ ಸ್ಥಳೀಯವಾಗಿ ಇತರೆ ಮೂಲಗಳಿಂದ ಹೊಂದಿಸಿಕೊಂಡು, ಇದಕ್ಕೆ ಅಗತ್ಯ ನೀಲಿನಕ್ಷೆ ಮತ್ತು ಅಂದಾಜು ಪಟ್ಟಿ ಸಿದ್ಧಪಡಿಸಿ, ನಿರ್ಮಾಣಕ್ಕೆ ಸ್ಥಳೀಯ ಪ್ರಾಧಿಕಾರಿಗಳಾದ ಮಹಾನಗರಪಾಲಿಕೆ, ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳಿಂದ ನಿಯಮಾನುಸಾರ ಪರವಾನಗಿ ಪಡೆದು ನಿರ್ಮಿಸಲಾಗುತ್ತಿದೆ. ಉಲ್ಲೇಖ-1, 2 ಮತ್ತು 3ರ ಸುತ್ತೋಲೆಗಳಲ್ಲಿ ಗುರುಭವನ ನಿರ್ಮಾಣಕ್ಕೆ ಮತ್ತು ನಿರ್ವಹಣೆಗೆ ಸಂಬಂಧಿಸಿದಂತೆ ಮಾರ್ಗಸೂಚಿಯನ್ನು ಹಾಗೂ ನಿಧಿಗಳ ಕಛೇರಿಯಿಂದ ನೀಡಲಾಗುವ ಅನುದಾನದ ಬಗ್ಗೆ ವಿವರ ನೀಡಲಾಗಿದೆ.

ಉಲ್ಲೇಖ-4ರಂತೆ ದಿನಾಂಕ: 01-02-2018 ರಂದು ನಡೆದ ನಿಧಿಗಳ ರಾಜ್ಯ ಸಮಿತಿ ಸಭೆಯಲ್ಲಿ ರಾಜ್ಯದ ವಿವಿಧ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ಗುರುಭವನ ಕಟ್ಟಡಗಳು ನಿರ್ಮಾಣಗೊಂಡಿಲ್ಲದ ಬಗ್ಗೆ ವಿಸ್ತೃತ ಚರ್ಚೆಯನ್ನು ನಡೆಸಲಾಯಿತು. ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಗುರುಭವನ ನಿರ್ಮಾಣಕ್ಕೆ ಪ್ರಸ್ತುತ ನೀಡುತ್ತಿರುವ ಅನುದಾನವನ್ನು ಪರಿಷ್ಕರಿಸಿ, ಜಿಲ್ಲಾ ಕೇಂದ್ರಗಳಲ್ಲಿ ಗುರುಭವನ ನಿರ್ಮಾಣಕ್ಕೆ ಗರಿಷ್ಠ ರೂ.1.00 ಕೋಟಿ ಹಾಗೂ ತಾಲ್ಲೂಕು ಕೇಂದ್ರದಲ್ಲಿ ಗುರುಭವನ ನಿರ್ಮಾಣಕ್ಕೆ ಗರಿಷ್ಠ ರೂ.50.00 ಲಕ್ಷಗಳ ಅನುದಾನವನ್ನು ದಿನಾಂಕ: 01-04-2018 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ನಿರ್ಣಯಿಸಲಾಯಿತು.

ಈ ಹಿನ್ನಲೆಯಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರದಲ್ಲಿ ಗುರುಭವನ ನಿರ್ಮಾಣಕ್ಕೆ ನಿಧಿಗಳ ವತಿಯಿಂದ ನೀಡಲಾಗುತ್ತಿರುವ ಅನುದಾನವನ್ನು ದಿನಾಂಕ: 01-04-2018ರ ನಂತರ ಹೊಸದಾಗಿ ಸಲ್ಲಿಸಲ್ಪಡುವ ಪ್ರಸ್ತಾವನಗಳಿಗೆ ಅನ್ವಯಿಸುವಂತೆ ಈ ಕೆಳಕಂಡಂತೆ ಪರಿಷ್ಕರಿಸಿದೆ.

.... 2

## ಅನುಬಂಧ – 1

ಜಿಲ್ಲಾ ಹಾಗೂ ತಾಲ್ಲೂಕು ಹಂತದ ಗುರುಭವನಗಳ ನಿರ್ಮಾಣಕ್ಕಾಗಿ ಪರಿಷ್ಕರಿಸಲಾದ ಅನುದಾನ

| ಕ್ರ ಸಂ | ಗುರುಭವನ ಸಭಾಂಗಣದ ವಿಸ್ತೀರ್ಣ | ಜಿಲ್ಲಾ ಹಂತಕ್ಕೆ ನೀಡಲಾಗುವ ಅನುದಾನ (ರೂ.ಲಕ್ಷಗಳಲ್ಲಿ) | ತಾಲ್ಲೂಕು ಹಂತಕ್ಕೆ ನೀಡಲಾಗುವ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|
| 1 | 1800 ಚ.ಅಡಿಗಳವರೆಗೆ | 25.00 | 25.00 |
| 2 | 1801 – 2400 ಚ.ಅಡಿಗಳವರೆಗೆ | 30.00 | 30.00 |
| 3 | 2401 – 3000 ಚ.ಅಡಿಗಳವರೆಗೆ | 35.00 | 35.00 |
| 4 | 3001 – 3600 ಚ.ಅಡಿಗಳವರೆಗೆ | 40.00 | — |
| 5 | 3601 – 4200 ಚ.ಅಡಿಗಳವರೆಗೆ | 45.00 | — |
| 6 | 4201 – 4800 ಚ.ಅಡಿಗಳವರೆಗೆ | 50.00 | — |
| 7 | 4801 – 5400 ಚ.ಅಡಿಗಳವರೆಗೆ | 55.00 | — |
| 8 | 5401 – 6000 ಚ.ಅಡಿಗಳವರೆಗೆ | 60.00 | — |
| 9 | 6001 – 6600 ಚ.ಅಡಿಗಳವರೆಗೆ | 65.00 | — |
| 10 | 6601 – 7200 ಚ.ಅಡಿಗಳವರೆಗೆ | 70.00 | — |
| 11 | 7200 ಚ.ಅಡಿಗಳ ಮೇಲ್ಪಟ್ಟು | 75.00 | — |
| 12 | ಕನಿಷ್ಠ 150 ಚ.ಅಡಿ ಅತಿಥಿ ಗೃಹದ ಪ್ರತಿ ಕೊಠಡಿಯೊಂದಕ್ಕೆ ರೂ.2.50 ಲಕ್ಷ (ಗರಿಷ್ಠ 10 ಕೊಠಡಿಗಳಿಗೆ ಶೌಚಾಲಯ ಒಳಗೊಂಡಂತೆ) | 25.00 (ಗರಿಷ್ಠ) | — |
| 13 | ಕನಿಷ್ಠ 100 ಚ.ಅಡಿ ಅತಿಥಿ ಗೃಹದ ಪ್ರತಿ ಕೊಠಡಿಯೊಂದಕ್ಕೆ ರೂ.1.50 ಲಕ್ಷ (ಗರಿಷ್ಠ 10 ಕೊಠಡಿಗಳಿಗೆ) | 15.00 (ಗರಿಷ್ಠ). | 15.00 (ಗರಿಷ್ಠ) |

ಕ್ರಮ ಸಂಖ್ಯೆ-12 ಹಾಗೂ 13ರಲ್ಲಿ ಸೂಚಿಸಿರುವಂತೆ ಎರಡು ವಿಧದ ಕೊಠಡಿಗಳನ್ನು ನಿರ್ಮಿಸಿದಲ್ಲಿ ಒಟ್ಟು ಗರಿಷ್ಠ 10 ಕೊಠಡಿಗಳಿಗೆ ಮಾತ್ರ ನಿಗಧಿಪಡಿಸಿರುವ ವಿಸ್ತೀರ್ಣ ಮತ್ತು ಮೊತ್ತಕ್ಕನುಗುಣವಾಗಿ ಅನುದಾನ ನೀಡಲಾಗುವುದು.

### ಗುರುಭವನ ನಿರ್ಮಾಣಕ್ಕೆ ಅನುದಾನ ಪಡೆಯಲು ಸಲ್ಲಿಸಬೇಕಾದ ದಾಖಲೆಗಳು

1. ಜಿಲ್ಲಾ/ತಾಲ್ಲೂಕು ಪಂಚಾಯತ್ ಅಥವಾ ಲೋಕೋಪಯೋಗಿ ಇಲಾಖೆಯ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಇವರಿಂದ ಅನುಮೋದಿಸಲ್ಪಟ್ಟ ಗುರುಭವನ ನಿರ್ಮಾಣದ ಮೂಲ ನೀಲಿ ನಕ್ಷೆ ಹಾಗೂ ಅಂದಾಜು ಪಟ್ಟಿ.
2. ಕಟ್ಟಡ ನಿರ್ಮಿಸಲು ಸ್ಥಳೀಯ ಪ್ರಾಧಿಕಾರದಿಂದ ಪಡೆದ ಪರವಾನಗಿ. (ಲೈಸೆನ್ಸ್)

.....3

3. ಗುರುಭವನ ಸಮಿತಿಯ ಹೆಸರಿನಲ್ಲಿ ನಿವೇಶನ ಇರುವುದಕ್ಕೆ ದಾಖಲೆ.
4. ಗುರುಭವನ ಕಟ್ಟಡ ನಿರ್ಮಿಸಲು ಅಂದಾಜು ಪಟ್ಟಿಯಂತೆ ಏಜೆನ್ಸಿಗಳ ವತಿಯಿಂದ ಮಂಜೂರಾಗುವ ಅನುದಾನವನ್ನು ಹೊರತುಪಡಿಸಿ, ಉಳಿಕೆ ಮೊತ್ತಕ್ಕೆ ಶಿಕ್ಷಕರು/ ಸ್ಥಳೀಯರಿಂದ ಸಂಗ್ರಹಿಸಿದ ವಂತಿಗೆ ಹಣವನ್ನು ಬ್ಯಾಂಕಿನಲ್ಲಿ ಜಮಾ ಮಾಡಿರುವುದಕ್ಕೆ ಬ್ಯಾಂಕಿನಿಂದ ಪಡೆದ ದಾಖಲೆ.
5. ಗುರುಭವನ ಸಮಿತಿ ರಚಿಸಿಕೊಂಡಿರುವ ಬಗ್ಗೆ ಪಟ್ಟಿ.

### ಜಿಲ್ಲಾ ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ರಚಿಸಿಕೊಳ್ಳಬೇಕಾದ ಪರಿಷ್ಕೃತ ಸಮಿತಿ

| | | |
|---|---|---|
| 1. | ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು(ಆಡಳಿತ). | ಅಧ್ಯಕ್ಷರು |
| 2. | ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಉಪನಿರ್ದೇಶಕರು. | ಹಿರಿಯ ಉಪಾಧ್ಯಕ್ಷರು |
| 3. | ಜಿಲ್ಲಾ ಪದವಿ ಪೂರ್ವ ಕಾಲೇಜುಗಳ ಪ್ರಾಂಶುಪಾಲರ ಸಂಘದ ಅಧ್ಯಕ್ಷರು. | ಉಪಾಧ್ಯಕ್ಷರು |
| 4. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಜಿಲ್ಲಾ ಅಧ್ಯಕ್ಷರು. | ಉಪಾಧ್ಯಕ್ಷರು |
| 5. | ಜಿಲ್ಲಾ ಪ್ರೌಢಶಾಲಾ ಸಹ ಶಿಕ್ಷಕರ ಸಂಘದ ಅಧ್ಯಕ್ಷರು. | ಉಪಾಧ್ಯಕ್ಷರು |
| 6. | ಜಿಲ್ಲಾ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ಸಂಘದ ಅಧ್ಯಕ್ಷರು. | ಉಪಾಧ್ಯಕ್ಷರು |
| 7. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಜಿಲ್ಲಾ ಕಾರ್ಯದರ್ಶಿ. | ಕಾರ್ಯದರ್ಶಿಗಳು |
| 8. | ಜಿಲ್ಲಾ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಮತ್ತು ಸಂಯುಕ್ತ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರ ಸಂಘದ ಕಾರ್ಯದರ್ಶಿ. | ಖಜಾಂಚಿಗಳು |
| 9. | ಸ್ಥಳೀಯ ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ/ಶಿಕ್ಷಣ ಮಹಾವಿದ್ಯಾಲಯದ ಪ್ರಾಂಶುಪಾಲರ ಪ್ರತಿನಿಧಿಗಳು. | ಸದಸ್ಯರು |
| 10. | ಜಿಲ್ಲಾ ಉಪನಿರ್ದೇಶಕರಿಂದ ನೇಮಕ ಮಾಡಲ್ಪಟ್ಟ ಯಾವುದೇ ದರ್ಜೆಯ ಒಬ್ಬ ಮಹಿಳಾ ಶಿಕ್ಷಕಿ. | ಸದಸ್ಯರು |
| 11 | ಜಿಲ್ಲಾ ಉಪನಿರ್ದೇಶಕರಿಂದ ನೇಮಕ ಮಾಡಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಶಿಕ್ಷಕರ/ಉಪನ್ಯಾಸಕರ ಒಬ್ಬ ಪ್ರತಿನಿಧಿ. | ಸದಸ್ಯರು |
| 12. | ಜಿಲ್ಲಾ ಕಾಲೇಜು ಉಪನ್ಯಾಸಕರ ಸಂಘದ ಅಧ್ಯಕ್ಷರು (ವೈದ್ಯಕೀಯ/ತಾಂತ್ರಿಕ ಶಿಕ್ಷಣ). | ಸದಸ್ಯರು |
| 13. | ಸೇವಾ ಹಿರಿತನದಲ್ಲಿರುವ ಉಪನಿರ್ದೇಶಕರ ಕಛೇರಿಯ ಶಿಕ್ಷಣಾಧಿಕಾರಿಗಳು. | ಸದಸ್ಯರು |
| 14 | ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು. | ಸದಸ್ಯರು |

### ತಾಲ್ಲೂಕು ಗುರುಭವನಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ರಚಿಸಿಕೊಳ್ಳಬೇಕಾದ ಪರಿಷ್ಕೃತ ಸಮಿತಿ

| | | |
|---|---|---|
| 1. | ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು. | ಅಧ್ಯಕ್ಷರು |
| 2. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ತಾಲ್ಲೂಕು ಅಧ್ಯಕ್ಷರು. | ಉಪಾಧ್ಯಕ್ಷರು |
| 3. | ತಾಲ್ಲೂಕು ಪ್ರೌಢಶಾಲಾ ಸಹ ಶಿಕ್ಷಕರ ಸಂಘದ ಅಧ್ಯಕ್ಷರು. | ಉಪಾಧ್ಯಕ್ಷರು |
| 4 | ತಾಲ್ಲೂಕು ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರ ಸಂಘದ ಅಧ್ಯಕ್ಷರು. | ಉಪಾಧ್ಯಕ್ಷರು |

......4

| | | |
|---|---|---|
| 5. | ಕರ್ನಾಟಕ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ತಾಲ್ಲೂಕು ಕಾರ್ಯದರ್ಶಿ. | ಕಾರ್ಯದರ್ಶಿಗಳು |
| 6. | ಸ್ಥಳೀಯ ಪ್ರೌಢಶಾಲಾ ಮುಖ್ಯೋಪಾಧ್ಯಾಯರು/ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರು. | ಖಜಾಂಚಿಗಳು |
| 7. | ಕಾಲೇಜು ಉಪನ್ಯಾಸಕರ ಸಂಘದ ಅಧ್ಯಕ್ಷರು. | ಸದಸ್ಯರು |
| 8. | ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ನೇಮಕ ಮಾಡಲ್ಪಟ್ಟ ಯಾವುದೇ ದರ್ಜೆಯ ಒಬ್ಬ ಮಹಿಳಾ ಶಿಕ್ಷಕಿ. | ಸದಸ್ಯರು |
| 9. | ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ನೇಮಕ ಮಾಡಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಶಿಕ್ಷಕರ/ಉಪನ್ಯಾಸಕರ ಒಬ್ಬ ಪ್ರತಿನಿಧಿ. | ಸದಸ್ಯರು |
| 10 | ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯ ಹಿರಿಯ ಶಿಕ್ಷಣ ಸಂಯೋಜಕರು. | ಸದಸ್ಯರು |

ಗುರುಭವನ ನಿರ್ಮಾಣ ಸಮಿತಿಯು ಉಲ್ಲೇಖಿತ ಸುತ್ತೋಲೆಗಳಲ್ಲಿ ಹೊರಡಿಸಲಾದ ಮಾರ್ಗಸೂಚಿ ಹಾಗೂ ನಿಬಂಧನೆಗಳಿಗನುಸಾರ ಜಿಲ್ಲಾ ಮತ್ತು ತಾಲ್ಲೂಕು ಹಂತದಲ್ಲಿ ಗುರುಭವನ ನಿರ್ಮಾಣ ಮಾಡಲು ಕ್ರಮ ವಹಿಸುವುದು. ಉಪನಿರ್ದೇಶಕರು(ಆಡಳಿತ) / ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಗತ್ಯ ಮೂಲಭೂತ ಸೌಲಭ್ಯಗಳು ಹಾಗೂ ಆರ್ಥಿಕ ಸಂಪನ್ಮೂಲಗಳನ್ನು ಗಮನದಲ್ಲಿಟ್ಟುಕೊಂಡು ಹೊಸ ಗುರುಭವನ ಕಟ್ಟಡ ನಿರ್ಮಾಣ ಕಾಮಗಾರಿಗೆ ಶಿಕ್ಷಕರ ಕಲ್ಯಾಣ ನಿಧಿಯಿಂದ ನೀಡುತ್ತಿರುವ ಧನ ಸಹಾಯವನ್ನು ಪಡೆದುಕೊಂಡು ಕಟ್ಟಡದ ಕಾಮಗಾರಿಯನ್ನು ಪೂರ್ಣಗೊಳಿಸಿ, ಗುರುಭವನವನ್ನು ಇಲಾಖೆ/ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಶೈಕ್ಷಣಿಕ ಚಟುವಟಿಕೆಗಳಿಗೆ ಉಪಯೋಗಿಸಿಕೊಳ್ಳಲು ತಿಳಿಸಿದೆ.

ಡಾ|| ಪಿ.ಸಿ.ಜಾಫರ್, ಭಾ.ಆ.ಸೇ.
ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ
ಹಾಗೂ ಕಾರ್ಯದರ್ಶಿ/ಖಜಾಂಚಿಗಳು ಕರ್ನಾಟಕ
ರಾಜ್ಯ ಶಿಕ್ಷಕರ ಕಲ್ಯಾಣ ನಿಧಿ.

ಪ್ರತಿಯನ್ನು:

1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರಿಗೆ.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ನೃಪತುಂಗ ರಸ್ತೆ, ಬೆಂಗಳೂರು ಇವರಿಗೆ.
3. ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ/ ರಾಜ್ಯ ಮಾಧ್ಯಮಿಕ ಶಿಕ್ಷಣ ಅಭಿಯಾನ ಇವರಿಗೆ.
4. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ / ಗುಲ್ಬರ್ಗ ಇವರಿಗೆ.
5. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ನಿರ್ದೇಶಕರಿಗೆ.
6. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಸಹ ನಿರ್ದೇಶಕರಿಗೆ.
7. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಉಪ ನಿರ್ದೇಶಕರು(ಆಡಳಿತ) ರವರಿಗೆ.
8. ಸಾರ್ವಜನಿಕ ಶಿಕ್ಷಣ ಇಲಾಖೆಯ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ.
9. ಅಧ್ಯಕ್ಷರು/ಕಾರ್ಯದರ್ಶಿಗಳು, ರಾಜ್ಯ/ ಜಿಲ್ಲೆ/ ತಾಲ್ಲೂಕು ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಮತ್ತು ಸಂಯುಕ್ತ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರ ಸಂಘ ಇವರಿಗೆ.
10. ಅಧ್ಯಕ್ಷರು/ಕಾರ್ಯದರ್ಶಿಗಳು, ರಾಜ್ಯ/ ಜಿಲ್ಲೆ/ ತಾಲ್ಲೂಕು ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರ ಸಂಘ ಇವರಿಗೆ.
11. ಅಧ್ಯಕ್ಷರು/ಕಾರ್ಯದರ್ಶಿಗಳು, ರಾಜ್ಯ/ ಜಿಲ್ಲೆ/ ತಾಲ್ಲೂಕು ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘ ಇವರಿಗೆ.
12. ಅಧ್ಯಕ್ಷರು/ಕಾರ್ಯದರ್ಶಿಗಳು, ರಾಜ್ಯ/ ಜಿಲ್ಲೆ/ ತಾಲ್ಲೂಕು ಪ್ರೌಢಶಾಲಾ ಸಹ ಶಿಕ್ಷಕರ ಸಂಘ ಇವರಿಗೆ.
13. ಅಧ್ಯಕ್ಷರು/ಕಾರ್ಯದರ್ಶಿಗಳು, ರಾಜ್ಯ/ ಜಿಲ್ಲೆ/ ತಾಲ್ಲೂಕು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಇವರಿಗೆ.
14. ಕಛೇರಿ ಪ್ರತಿ.

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 12 ಪಿಎಂಎ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:13-03-2020.

ಇಂದ:

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

132
U.S
12/3/2020

ಇವರಿಗೆ :

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು-01.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ರಘುಪತಿ ಭಟ್ .ಕೆ (ಉಡುಪಿ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1429 ಕ್ಕೆ ಉತ್ತರ ನೀಡುವ ಕುರಿತು.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ರಘುಪತಿ ಭಟ್ .ಕೆ (ಉಡುಪಿ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1429 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಎಂ. ಶರಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪ್ರಾಥಮಿಕ ಶಿಕ್ಷಣ) ಶಿಕ್ಷಣ ಇಲಾಖೆ.

# ಕರ್ನಾಟಕ ವಿಧಾನಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1429 |
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ .ಕೆ (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | : | 12-03-2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಪ್ರಾಥಮಿಕ ಶಾಲಾ ಪದವೀಧರ ಶಿಕ್ಷಕರ ದಿನಾಂಕ:19-05-2017, 07-08-2019ರ ಹೊಸ ವೃಂದ ಮತ್ತು ನೇಮಕಾತಿ ನಿಯಮದ ಸಿ ಅಂಡ್ ಆರ್‌ನಲ್ಲಿ ಸೇವಾ ನಿರತ ಪ್ರಾಥಮಿಕ ಶಾಲಾ ಪದವಿ ಶಿಕ್ಷಕರ ಹಾಗೂ ನೇರ ನೇಮಕಾತಿಗೊಂಡ ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕರ ಸೇವೆಯಲ್ಲಿನ ತಾರತಮ್ಯತೆಯ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ.<br>ದಿನಾಂಕ:07-08-2017ರ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕರು (6-8) ವೃಂದವು ಹೊಸದಾಗಿ ಅಸ್ತಿತ್ವಕ್ಕೆ ಬಂದಿದ್ದು, ಶೇ.75 ನೇರ ನೇಮಕಾತಿ ಇದ್ದು, ಶೇ.25ರಂತೆ ಸೇವಾ ನಿರತರ ಕೋಟ ನಿಗಧಿಯಾಗಿದ್ದು, ಸದರಿ ಹುದ್ದೆಗಳಿಗೆ 1 ರಿಂದ 5ನೇ ತರಗತಿಯಲ್ಲಿನ ಪದವಿಧರ ಅರ್ಹ ಶಿಕ್ಷಕರು ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಆಯ್ಕೆಯಾಗಲು ಅವಕಾಶ ಕಲ್ಪಿಸಲಾಗಿದ್ದು, ಯಾವುದೇ ಸೇವಾ ತಾರತಮ್ಯ ಇರುವುದಿಲ್ಲ. |
| ಆ. | ಸೇವಾ ನಿರತ ಪ್ರಾಥಮಿಕ ಶಾಲಾ ಅರ್ಹ ವಿದ್ಯಾರ್ಹತೆಯನ್ನು ಹೊಂದಿದ (ಪದವಿಯನ್ನು ಪಡೆದ) ಶಿಕ್ಷಕರನ್ನು 1-5 ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಮಾತ್ರ ಪರಿಗಣಿಸಿದ್ದು, 6-8ನೇ ತರಗತಿವರೆಗೆ ಅಥವಾ ವೃಂದಕ್ಕೆ ಸದರಿಯವರನ್ನು ವಿಲೀನಗೊಳಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡಿರುವ ಕ್ರಮವೇನು; | ದಿನಾಂಕ:07-08-2017ರ ವೃಂದ ಮತ್ತು ನೇಮಕಾತಿ ನಿಯಮಗಳಂತೆ ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕರು (6 ರಿಂದ 8ನೇ ತರಗತಿಗಳ) ವೃಂದವು ಹೊಸದಾಗಿ ಅಸ್ತಿತ್ವಕ್ಕೆ ಬಂದಿದ್ದು, ಶೇ.75:25ರಂತೆ ನೇರ ನೇಮಕಾತಿ ಮತ್ತು ಸೇವಾ ನಿರತರ ಕೋಟಾ ನಿಗದಿಯಾಗಿದ್ದು, ಶೇ.75ರ ಕೋಟಾದ ಹುದ್ದೆಗಳಲ್ಲಿ ನೇರ ನೇಮಕಾತಿ ಮಾಡಲಾಗಿದೆ.<br>ಜಾರಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಂತೆ 1 ರಿಂದ 5ನೇ ತರಗತಿ ವೃಂದದ ಶಿಕ್ಷಕರನ್ನು 6 ರಿಂದ 8ನೇ ತರಗತಿ ವೃಂದಕ್ಕೆ ನೇರವಾಗಿ ವಿಲೀನಗೊಳಿಸಲು ಅವಕಾಶವಿರುವುದಿಲ್ಲ. 1 ರಿಂದ 5ನೇ |

| | | |
|---|---|---|
| | | ತರಗತಿ ವೃಂದದಲ್ಲಿನ ಶಿಕ್ಷಕರು ಪದವಿ ವಿದ್ಯಾರ್ಹತೆ ಹೊಂದಿದ್ದಲ್ಲಿ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ಸೇವಾನಿರತ ಕೋಟಾದಡಿ ಆಯ್ಕೆಯಾಗಲು ಅವಕಾಶವಿರುತ್ತದೆ. |
| ಇ. | ಸಿ ಅಂಡ್ ಆರ್ ರೂಲ್‌ನಲ್ಲಿ ಪದವಿಯಲ್ಲಿ ಬಿ.ಎಸ್.ಸಿ ಸಿ.ಪಿ.ಝಡ್ ಪದವಿ ಮಾಡಿದ ಹಾಗೂ ಸಮಾಜ ವಿಜ್ಞಾನ ಹುದ್ದೆಗಳಿಗೆ ಪದವಿಯಲ್ಲಿ ಸಮಾಜ ಶಾಸ್ತ್ರ ಅಧ್ಯಯನ ಶಿಕ್ಷಕರನ್ನು ಪರಿಗಣಿಸುವ ಬಗ್ಗೆ ಸರ್ಕಾರದ ನಿಲುವೇನು; (ವಿವರ ನೀಡುವುದು) | ಪ್ರಸ್ತುತ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |
| ಈ. | ದೈಹಿಕ ಶಿಕ್ಷಕರಲ್ಲಿ ಬಿ.ಎ, ಬಿ.ಪಿ.ಡಿ ಆದ ಸೇವಾ ನಿರತರಿಗೆ ಜಿ.ಪಿ.ಟಿ (6–8) ದೈಹಿಕ ಶಿಕ್ಷಕರ ಹುದ್ದೆಗೆ ಮುಂಬಡ್ತಿ ನೀಡುವುದು ಹಾಗೂ ಹಿಂದಿ ಪದವೀಧರ ಶಿಕ್ಷಕರನ್ನು ಕೂಡ 6–8ನೇ ತರಗತಿ ಪರಿಗಣಿಸುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅವರನ್ನು ಪದವೀಧರ ಶಿಕ್ಷಕರನ್ನಾಗಿ ಪರಿಗಣಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | • ದೈಹಿಕ ಶಿಕ್ಷಕರು ಪ್ರತ್ಯೇಕ ವೃಂದದ ಶಿಕ್ಷಕರಾಗಿದ್ದು, ಜಿ.ಪಿ.ಟಿ (6–8) ದೈಹಿಕ ಶಿಕ್ಷಕರು ಎಂಬ ವೃಂದದ ಹುದ್ದೆಯನ್ನು ಸೃಜಿಸಲಾಗಿರುವುದಿಲ್ಲ.<br>• ಹಿಂದಿ ಶಿಕ್ಷಕರಲ್ಲಿ ಪದವಿ ವಿದ್ಯಾರ್ಹತೆ ಹೊಂದಿದ್ದಲ್ಲಿ ಸ್ಪರ್ಧಾತ್ಮಕ ಪರೀಕ್ಷೆ ಮೂಲಕ 6 ರಿಂದ 8ನೇ ತರಗತಿ ವೃಂದಕ್ಕೆ ಆಯ್ಕೆಯಾಗಲು ಅವಕಾಶವಿರುತ್ತದೆ. |

ಇಪಿ 12 ಪಿಎಂಎ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 11 ಪಿಎಂಎ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:13-03-2020.

107
U.S
12/3/2020

ಇಂದ:

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ :

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು-01.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಮಹೇಸ್ .ಎನ್ (ಕೊಳ್ಳೇಗಾಲ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:704 ಕ್ಕೆ ಉತ್ತರ ನೀಡುವ ಕುರಿತು.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಮಹೇಸ್ .ಎನ್ (ಕೊಳ್ಳೇಗಾಲ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:704 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಎಂ. ಶಶಿಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪ್ರಾಥಮಿಕ ಶಿಕ್ಷಣ) ಶಿಕ್ಷಣ ಇಲಾಖೆ.

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 704
ಸದಸ್ಯರ ಹೆಸರು : ಶ್ರೀ ಮಹೇಶ್ ಎನ್. (ಕೊಳ್ಳೇಗಾಲ)
ಉತ್ತರಿಸಬೇಕಾದ ದಿನಾಂಕ : 12-03-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ನಾತಕೋತ್ತರ ಮತ್ತು ಬಿ.ಎಡ್ ಪದವೀಧರ ಶಿಕ್ಷಕರ ಸಂಖ್ಯೆ ಎಷ್ಟು; ಇವರಿಗೆ ನೀಡುತ್ತಿರುವ ಕಾರ್ಯಭಾರ ಮತ್ತು ವೇತನ ಶ್ರೇಣಿ ಏನು; (ವಿವರ ನೀಡುವುದು) | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ನಾತಕೋತ್ತರ ಪದವೀಧರರ ಸಂಖ್ಯೆ – 32561. ಮತ್ತು ಬಿ.ಎಡ್. ಪದವೀಧರ ಶಿಕ್ಷಕರ ಸಂಖ್ಯೆ–3916. ವೃಂದ ಮತ್ತು ನೇಮಕಾತಿ ನಿಯಮಗಳನುಸಾರ ಎಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಏಕ ರೂಪವಾಗಿ ಅವರು ಆಯ್ಕೆಯಾಗಿರುವ ಹುದ್ದೆಯ ವೇತನಶ್ರೇಣಿ ಅನ್ವಯವಾಗುತ್ತದೆ.<br>ಹಿರಿಯ ಪ್ರಾಥಮಿಕ ಶಾಲೆಯಲ್ಲಿ ವಿಷಯವಾರು ಅವಧಿ ಹಂಚಿಕೆಯ ವಿವರಗಳನ್ನೊಳಗೊಂಡ ಪ್ರತ್ಯೇಕ ತ:ಖ್ತೆಯನ್ನು ಅಡಕಗೊಳಿಸಿದೆ. ಸದರಿ ಅನುಬಂಧದಲ್ಲಿರುವಂತೆ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ ಲಭ್ಯತೆ ಅನುಗುಣವಾಗಿ ಕಾರ್ಯಹೊರೆ ನಿರ್ವಹಿಸಬೇಕಾಗಿರುತ್ತದೆ.<br>ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಅನ್ವಯವಾಗುವ ವೇತನ ಶ್ರೇಣಿ ರೂ 25800–51400. |
| ಆ. | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿಗೆ (6 ರಿಂದ 8ನೇ ತರಗತಿ) 2005 ಮತ್ತು 2007ರಲ್ಲಿ ನೇಮಕ ಹೊಂದಿದ ಸಹ ಶಿಕ್ಷಕರ (Trained Graduate Teacher) ಸಂಖ್ಯೆ ಎಷ್ಟು; ಇವರಿಗೆ ನೀಡುತ್ತಿರುವ ಕಾರ್ಯಭಾರ ಮತ್ತು ವೇತನ ಶ್ರೇಣಿ ಏನು; | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿಗೆ (6 ರಿಂದ 8ನೇ ತರಗತಿ) 2005 ರಲ್ಲಿ ನೇಮಕವಾದ ಟಿಜಿಟಿ ಶಿಕ್ಷಕರ ಸಂಖ್ಯೆ 1115 ಮತ್ತು 2007 ರಲ್ಲಿ ನೇಮಕ ಹೊಂದಿದ ಟಿಜಿಟಿ ಶಿಕ್ಷಕರ ಸಂಖ್ಯೆ–2169. ಈ 02 ವರ್ಷಗಳಲ್ಲಿ ನೇಮಕಗೊಂಡ ಒಟ್ಟು ಟಿಜಿಟಿ ಶಿಕ್ಷಕರ ಸಂಖ್ಯೆ–3284.<br>ಸರ್ಕಾರಿ ಉನ್ನತೀಕರಿಸಿದ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರೌಢಶಾಲಾ ಸಹಶಿಕ್ಷಕರ ವೃಂದದ ಟಿ.ಜಿ.ಟಿ ಶಿಕ್ಷಕರಿಗೆ 8 ನೇ ತರಗತಿ ವಿಜ್ಞಾನ ಪಾಠ ಬೋಧನೆ |

| | | ಕಾರ್ಯಭಾರ ಇದ್ದು, ಪ್ರೌಢ ಶಾಲಾ ಸಹಶಿಕ್ಷಕರ ವೃಂದದ ವೇತನ ಶ್ರೇಣಿ ರೂ 33400-62600 ಅನ್ವಯವಾಗುತ್ತದೆ. |
|---|---|---|
| ಇ. | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳ ಸ್ನಾತಕ ಪದವಿ ಮತ್ತು ಬಿ.ಎಡ್ ಪದವೀಧರ ಶಿಕ್ಷಕರಿಗೆ ಪ್ರೌಢಶಾಲೆಗಳಿಗೆ ಪದೋನ್ನತಿ ನೀಡುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಪ್ರೌಢಶಾಲಾ ವೃಂದ ನೇಮಕಾತಿ ನಿಯಮಗಳಂತೆ ಪ್ರಾಥಮಿಕ ಶಾಲಾ ಶಿಕ್ಷಕರ ವೃಂದದಿಂದ ಪ್ರೌಢಶಾಲಾ ಶಿಕ್ಷಕರ - ಗ್ರೇಡ್ 2 ವೃಂದದ ಹುದ್ದೆಗೆ ಬಡ್ತಿಗೆ ನಿಯಮಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. |
| ಈ. | 6 ರಿಂದ 8ನೇ ತರಗತಿಗಳಿಗೆ ಬೋಧಿಸಲು ನೇಮಿಸಿಕೊಂಡ ಸಹ ಶಿಕ್ಷಕರನ್ನು (Trained Graduate Teacher) ಪ್ರೌಢಶಾಲೆಗಳಿಗೆ ಹುದ್ದೆ ಮರುಹೊಂದಾಣಿಕೆ ಮಾಡುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರೌಢಶಾಲಾ ಶಿಕ್ಷಕರ ಗ್ರೇಡ್-2 ವೃಂದದ ಟಿ.ಜಿ.ಟಿ ಶಿಕ್ಷಕರ ಮರು ಹೊಂದಾಣಿಕೆ ಮಾಡುವಂತೆ ಸೂಚಿಸಲಾಗಿದೆ.<br>ಒಟ್ಟು-3691 ಟಿ.ಜಿ.ಟಿ ಶಿಕ್ಷಕರನ್ನು ಮರು ಹೊಂದಾಣಿಕೆ ಮಾಡಬೇಕಾಗಿರುತ್ತದೆ. ಆ ಪೈಕಿ ಒಟ್ಟು-555 ಟಿ.ಜಿ.ಟಿ ಶಿಕ್ಷಕರನ್ನು ಹೊಂದಾಣಿಕೆ ಮಾಡಿಕೊಳ್ಳಲಾಗಿದೆ.<br>(ಜಿಲ್ಲಾವಾರು ಪಟ್ಟಿ ಅನುಬಂಧ-1ರಲ್ಲಿ ಲಗತ್ತಿಸಿದೆ.)<br>ಆಯಾ ಜಿಲ್ಲೆಗಳಲ್ಲಿ ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿ ಹುದ್ದೆಗಳು ಲಭ್ಯವಿಲ್ಲದಿದ್ದಲ್ಲಿ, ಮುಂದಿನ 03 ವರ್ಷಗಳೊಳಗಾಗಿ ಖಾಲಿ ಹುದ್ದೆಗಳ ಲಭ್ಯತೆಯನ್ನಾಧರಿಸಿ ಹಂತ-ಹಂತವಾಗಿ ಮರು ಹೊಂದಾಣಿಕೆ ಮಾಡಲು ಸೂಚಿಸಲಾಗಿದೆ. |
| ಉ. | Assistant Graduate Teacher (AGT) ಮತ್ತು Trained Graduate Teacher (TGT) ಗಳ ನಡುವಿನ ವೇತನ ತಾರತಮ್ಯ ಹಾಗೂ ಇತ್ಯಾದಿ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? | ಎಜಿಟಿ ಎಂಬ ಪದನಾಮದ ಯಾವುದೇ ಹುದ್ದೆ ಇರುವುದಿಲ್ಲ. ಪ್ರಯುಕ್ತ ಪ್ರಶ್ನೆ ಉದ್ಭವಿಸುವುದಿಲ್ಲ. |

**ಇಪಿ 11 ಪಿಎಂಎ 2020**

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

ಅನುಬಂಧ - 1

AS PER TDS (E-Governance)

| District_Name | Total TGT as on 16-10-2018 (TOTAL APPOINTED) | Total TGT as on 11-03-2020 (WORKING AT PRIMARY) | Total TGT Shifted to High school as on 11-03-2020 |
|---|---|---|---|
| BAGALAKOTE | 147 | 127 | 20 |
| BALLARI | 302 | 256 | 46 |
| BELAGAVI | 167 | 152 | 15 |
| BENGALURU North | 59 | 48 | 11 |
| BENGALURU Rural | 86 | 83 | 3 |
| BENGALURU South | 104 | 88 | 16 |
| Bidar | 242 | 208 | 34 |
| CHAMARAJANAGARA | 115 | 113 | 2 |
| CHIKKABALLAPURA | 67 | 63 | 4 |
| CHIKKAMAGALURU | 30 | 19 | 11 |
| Chikkodi | 197 | 174 | 23 |
| Chitradurga | 86 | 80 | 6 |
| Dakshina Kannada | 193 | 186 | 7 |
| Davangere | 153 | 139 | 14 |
| DHARAWADA | 192 | 160 | 32 |
| GADAGA | 121 | 86 | 35 |
| HASSANA | 16 | 1 | 15 |
| Haveri | 220 | 206 | 14 |
| KALABURAGI | 338 | 318 | 20 |
| Kodagu | 23 | 23 | 0 |
| KOLARA | 75 | 69 | 6 |
| KOPPALA | 138 | 106 | 32 |
| Madhugiri | 44 | 40 | 4 |
| Mandya | 18 | 18 | 0 |
| MYSURU | 156 | 138 | 18 |
| RAICHURU | 168 | 125 | 43 |
| RAMANAGARA | 82 | 72 | 10 |
| SHIVAMOGGA | 152 | 122 | 30 |
| Sirsi | 45 | 33 | 12 |
| TUMAKURU | 56 | 45 | 11 |
| Udupi | 72 | 68 | 4 |
| Uttara Kannada | 20 | 19 | 1 |
| VIJAYAPURA | 269 | 230 | 39 |
| YADAGIRI | 93 | 76 | 17 |
| Grand Total | 4246 | 3691 | 555 |

ಅನುಬಂಧ

ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ವಿಷಯವಾರು ಅವಧಿ ಹಂಚಿಕೆ.

| ವಿಷಯಗಳು | ಪ್ರಥಮ ಭಾಷೆ | ದ್ವಿತಿಯ ಭಾಷೆ | ತೃತಿಯ ಭಾಷೆ | ಗಣಿತ | | ವಿಜ್ಞಾನ | ಸಮಾಜ ವಿಜ್ಞಾನ | ಮೌಲ್ಯಗಳು | ಜೀವನ ವಿಜ್ಞಾನ | ಸಾ.ಉ | ಒಟ್ಟು |
|---|---|---|---|---|---|---|---|---|---|---|---|
| ಅವಧಿಗಳು | 7 | 5 | 4 | 6 | | 6 | 6 | 1 | 5 | 5 | 45 |

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 36 ಹೆಚ್‌ಪಿಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 12.03.2020

163
4/S
12/3/20

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ**: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1545 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ**: ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ1545/2020, ದಿನಾಂಕ:02.03.2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಂಜೇಗೌಡ ಕೆ.ವೈ (ಮಾಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1545ಕ್ಕೆ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ

(ಎನ್.ಆರ್ ಎರೆಕುಪ್ಪಿ)
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1545
ಸದಸ್ಯರ ಹೆಸರು : ಶ್ರೀ ಶಿವಲಿಂಗೇಗೌಡ ಕೆ.ಎಂ (ಅರಸೀಕೆರೆ)
ಉತ್ತರಿಸುವ ದಿನಾಂಕ : 12.03.2020
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅರಸೀಕೆರೆ ತಾಲ್ಲೂಕಿಗೆ ಇಂಜಿನಿಯರಿಂಗ್ ಕಾಲೇಜು ಮಂಜೂರಾಗಿದೆಯೇ; | ಮಂಜೂರಾಗಿದೆ. |
| ಆ) | ಮಂಜೂರಾಗಿದ್ದಲ್ಲಿ, ನಿವೇಶನ ದೊರೆತಿದೆಯೇ; | ದೊರೆತಿದೆ. |
| ಇ) | ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಯಾವ ಪ್ರಕ್ರಿಯೆ ನಡೆಯುತ್ತಿದೆ; | ಪ್ರಸ್ತುತ ಕಾಮಗಾರಿಗೆ ಟೆಂಡರ್ ಕರೆಲಾಗಿದ್ದು, Tender evaluation ಪ್ರಕ್ರಿಯೆ ಜಾರಿಯಲ್ಲಿದೆ. |
| ಈ) | ಕಾಲೇಜನ್ನು ಯಾವ ವರ್ಷದಿಂದ ಪ್ರಾರಂಭಿಸಲಾಗುವುದು ಮತ್ತು ಯಾವ ಯಾವ ವಿಷಯಗಳನ್ನು ಅಳವಡಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | ಎ.ಐ.ಸಿ.ಟಿ.ಇ ಮಾರ್ಗಸೂಚಿಯನ್ವಯ ಕಟ್ಟಡ ಕಾಮಗಾರಿಯು ಪೂರ್ಣಗೊಂಡ ನಂತರ ಇತರೇ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಎಐಸಿಟಿಇ ಅನುಮೋದನೆ ದೊರೆತ ನಂತರ ಕಾಲೇಜನ್ನು ಪ್ರಾರಂಭಿಸಲಾಗುವುದು.<br>ಈ ಕೆಳಕಂಡ ಕೋರ್ಸು (ವಿಷಯ) ಗಳಿಗೆ ಮಂಜೂರಾತಿ ನೀಡಿ ಆದೇಶಿಸಿದೆ.<br>1. ಸಿವಿಲ್ ಇಂಜಿನಿಯರಿಂಗ್.<br>2. ಮೆಕ್ಯಾನಿಕಲ್ ಇಂಜಿನಿಯರಿಂಗ್.<br>3. ಎಲೆಕ್ಟ್ರಾನಿಕ್ಸ್ ಅಂಡ್ ಕಮ್ಯೂನಿಕೇಷನ್ ಇಂಜಿನಿಯರಿಂಗ್.<br>4. ಎಲೆಕ್ಟ್ರಿಕ್ ಅಂಡ್ ಎಲೆಕ್ಟ್ರಾನಿಕ್ಸ್ ಇಂಜಿನಿಯರಿಂಗ್.<br>5. ಕಂಪ್ಯೂಟರ್ ಸೈನ್ಸ್ ಇಂಜಿನಿಯರಿಂಗ್. |

ಕಡತ ಸಂಖ್ಯೆ: ಇಡಿ 36 ಹೆಚ್‌ಪಿಟಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿಗಳು ಹಾಗೂ
ಉನ್ನತ ಶಿಕ್ಷಣ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 34 ಹೆಚ್‌ಪಿಸಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 10.03.2020

87
4/S
12/3/20

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**

ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ**: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರ ಬಂಗಾರಪ್ಪ ಎಸ್ (ಸೊರಬ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 700 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ**: ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.700/2020, ದಿನಾಂಕ:02.03.2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರ ಬಂಗಾರಪ್ಪ ಎಸ್ (ಸೊರಬ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 700 ಕ್ಕೆ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ

(ಎನ್ ಆರ್ ಎರೆಕುಪ್ಪಿ)
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 700
ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ ಎಸ್ (ಸೊರಬ)
ಉತ್ತರಿಸುವ ದಿನಾಂಕ : 12.03.2020
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸೊರಬ ತಾಲ್ಲೂಕಿನ ಚಂದ್ರಗುತ್ತಿಯಲ್ಲಿ ನೂತನ ಸರ್ಕಾರಿ ಪ್ರಥಮ ದರ್ಜೆ ಕಾಲೇಜನ್ನು ಪ್ರಾರಂಭಿಸುವ ಯೋಜನೆ ಸರ್ಕಾರ ಹಮ್ಮಿಕೊಂಡಿದೆಯೇ; | ಇಲ್ಲ |
| (ಆ) | ಇದ್ದಲ್ಲಿ, ಪ್ರಸ್ತುತ ನೂತನ ಕಾಲೇಜನ್ನು 2020-21ನೇ ಶೈಕ್ಷಣಿಕ ವರ್ಷದಿಂದಲೇ ಪ್ರಾರಂಭವಾಗುವುದೇ? | ಉದ್ಭವಿಸುವುದಿಲ್ಲ. |
| (ಇ) | ಯಾವ ಯಾವ ನೂತನ ಕೋರ್ಸ್‌ಗಳನ್ನು ಪ್ರಾರಂಭಿಸಲಾಗುವುದು? | |

ಸಂಖ್ಯೆ: ಇಡಿ 34 ಹೆಚ್‌ಪಿಸಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿ ಹಾಗೂ
ಉನ್ನತ ಶಿಕ್ಷಣ ಸಚಿವರು

ವಿಷಯ:- ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರ ಬಂಗಾರಪ್ಪ ಎಸ್ (ಸೊರಬ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 700 ಕ್ಕೆ ಉತ್ತರ ಒದಗಿಸುವ ಬಗ್ಗೆ.

ಇಡಿ 34 ಹೆಚ್‌ಪಿಸಿ 2020

1. ಕಾರ್ಯದರ್ಶಿ, ವಿಧಾನ ಸಭಾ ಸಚಿವಾಲಯದಿಂದ ಬಂದಿರುವ ವಿಧಾನ ಸಭಾ ಪ್ರಶ್ನೆಗಳಲ್ಲಿ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರ ಬಂಗಾರಪ್ಪ ಎಸ್ (ಸೊರಬ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 700 ಕ್ಕೆ ನಿರ್ದೇಶಕರು ಕಾಲೇಜು ಶಿಕ್ಷಣ ಇಲಾಖೆರವರಿಂದ ಬಂದಿರುವ ಉತ್ತರವನ್ನು ಕಡತದಲ್ಲಿ ಇಡಲಾಗಿದೆ. ಸದರಿ ಉತ್ತರ / ಮಾಹಿತಿಯಂತೆ ಕರಡು ಉತ್ತರವನ್ನು ತಯಾರಿಸಿ ಅನುಮೋದನೆಗಾಗಿ ಸಲ್ಲಿಸಿದೆ.

2) ಶಾಖಾಧಿಕಾರಿ)

3) ಆಂತರಿಕ ಆರ್ಥಿಕ ಸಲಹೆಗಾರರು)

4) ಅಪರ ಮುಖ್ಯ ಕಾರ್ಯದರ್ಶಿಗಳು)

5) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು)

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 35 ಹೆಚ್‌ಪಿಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ: 10.03.2020

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು
ಉನ್ನತ ಶಿಕ್ಷಣ ಇಲಾಖೆ,

**ಇವರಿಗೆ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ
ಬೆಂಗಳೂರು

ಮಾನ್ಯರೆ

**ವಿಷಯ**: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಲಿಂಗೇಶ್ ಕೆ.ಎಸ್(ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1377 ಕ್ಕೆ ಉತ್ತರ ಒದಗಿಸುತ್ತಿರುವ ಬಗ್ಗೆ.

**ಉಲ್ಲೇಖ**: ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ1377/2020, ದಿನಾಂಕ:28.02.2020

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಲಿಂಗೇಶ್ ಕೆ.ಎಸ್(ಬೇಲೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1377ಕ್ಕೆ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲಾಗಿದೆ.

ತಮ್ಮ ನಂಬುಗೆಯ

(ಎನ್.ಆರ್ ಎರೆಕುಪ್ಪಿ)
ಸರ್ಕಾರದ ಉಪ ಕಾರ್ಯದರ್ಶಿ ಮತ್ತು
ಆಂತರಿಕ ಆರ್ಥಿಕ ಸಲಹೆಗಾರರು,
ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ).

# ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 41 ಡಿಜಿಡಬ್ಲ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 11/03/2020.

**ಇವರಿಂದ:-**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
ಶಿಕ್ಷಣ ಇಲಾಖೆ,
ಬೆಂಗಳೂರು.

**ಇವರಿಗೆ:-**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ/ಪರಿಷತ್ತು ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:-** ಮಾನ್ಯ ಕರ್ನಾಟಕ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ ಆನಂದ ಸಿದ್ದು ನ್ಯಾಮಗೌಡ ರವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ/ನಿಯಮ 399 ಕ್ಕೆ ಉತ್ತರ ಒದಗಿಸುವ ಬಗ್ಗೆ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ ಆನಂದ ಸಿದ್ದು ನ್ಯಾಮಗೌಡ ಇವರ ಚುಕ್ಕೆ ಗುರುತಿನ/ರಹಿತ ಪ್ರಶ್ನೆ ಸಂಖ್ಯೆ: 399ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶೇಖರ) 11/03/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪದವಿ ಪೂರ್ವ ಶಿಕ್ಷಣ)

**ಕರ್ನಾಟಕ ವಿಧಾನ ಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 399 |
| ಸದಸ್ಯರ ಹೆಸರು | : | ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) |
| ಉತ್ತರಿಸುವ ದಿನಾಂಕ | : | 12-03-2020 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉರ್ದು ಭಾಷೆಯಲ್ಲಿ ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿಗಳಿಗೆ ಪಿ.ಯು.ಸಿ. ವ್ಯಾಸಂಗ ಮಾಡಲು ರಾಜ್ಯದಲ್ಲಿರುವ ಪಿ.ಯು.ಸಿ. ಕಾಲೇಜುಗಳು ಎಷ್ಟು; | ರಾಜ್ಯದಲ್ಲಿನ 699 ಸರ್ಕಾರಿ/ಅನುದಾನಿತ/ಅನುದಾನರಹಿತ ಪದವಿ ಪೂರ್ವ ಕಾಲೇಜುಗಳಲ್ಲಿ ಉರ್ದು ಭಾಷೆಯನ್ನು ಒಂದು ಭಾಷಾ ವಿಷಯವಾಗಿ ಬೋಧಿಸಲಾಗುತ್ತಿದೆ. |
| ಆ) | ಉರ್ದು ಭಾಷೆಯಲ್ಲಿ ವ್ಯಾಸಂಗ ಮಾಡಲು ರಾಜ್ಯದಲ್ಲಿರುವ ಪದವಿ ಕಾಲೇಜುಗಳ ಮಾಹಿತಿ ನೀಡುವುದು; | ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಉರ್ದು ಭಾಷೆಯ ಮಾಧ್ಯಮದಲ್ಲಿ ವ್ಯಾಸಂಗ ಮಾಡಲು ಯಾವುದೇ ಪದವಿ ಕಾಲೇಜುಗಳು ಪ್ರಾರಂಭವಾಗಿರುವುದಿಲ್ಲ.<br><br>ಪ್ರಸ್ತುತ 13 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಉರ್ದು ಭಾಷೆಯನ್ನು ಐಚ್ಛಿಕ/ಭಾಷೆಯಾಗಿ ಒಟ್ಟು 220 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ.<br><br>ವಿವರಗಳನ್ನು ಅನುಬಂಧ-ಅ ರಲ್ಲಿ ನೀಡಲಾಗಿದೆ. |
| ಇ) | ಉರ್ದು ಭಾಷೆಯಲ್ಲಿ ಪಿ.ಯು.ಸಿ. ಮತ್ತು ಡಿಗ್ರಿ ಕಾಲೇಜುಗಳು ಯಾವಾಗ ಪ್ರಾರಂಭಿಸಲಾಗುತ್ತದೆ; | <u>ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಉತ್ತರ</u><br><br>ಯಾವುದೇ ಪ್ರಸ್ತಾವನೆ ಇಲಾಖೆಯ ಮುಂದಿಲ್ಲ.<br><br><u>ಕಾಲೇಜು ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಉತ್ತರ</u><br><br>ಯಾವುದೇ ಪ್ರಸ್ತಾವನೆಯು ಸ್ವೀಕೃತವಾಗಿರುವುದಿಲ್ಲ. |

**ಸಂಖ್ಯೆ: ಇಡಿ 41 ಡಿಜಿಡಬ್ಲ್ಯೂ 2020**

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

ಕಾಲೇಜು ಶಿಕ್ಷಣ ಇಲಾಖೆ

ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಉರ್ದು ಭಾಷೆಯನ್ನು ಐಚ್ಛಿಕವಾಗಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ

| Sl No. | Name | Course | Male | Female | Grand Total |
|---|---|---|---|---|---|
| 1 | Maharanis Arts, Commerce and Management College for Women, Bangalore 560 001. | BA-HEUopt(History - Economics - OptionalUrdu) | 0 | 2 | 2 |
| 2 | Maharans Arts College for Women,JLB Road, Mysore - 570 005 | BA-HEUopt(History - Economics - OptionalUrdu) | 0 | 20 | 20 |
| 3 | Sir.M.Vishweshwaraiah Govt. Arts & Commerce College, New Town, Bhadravathi - 577 301. | BA-HEUopt(History - Economics - OptionalUrdu) | 0 | 28 | 28 |
| 4 | Govt. First Grade College, Vidyanagar, Alnavar - 581 103. (Dharwad Tq.) | BA-HPUopt(History - Political Science - Optional Urdu) | 5 | 21 | 26 |
| 5 | Lalithadevi Gurusiddappa Singhura Govt. First Grade College, Savannur - 581 118. | BA - HSUopt(History - Sociology - Optional Urdu) | 1 | 8 | 9 |
| 6 | Lalithadevi Gurusiddappa Singhura Govt. First Grade College, Savannur - 581 118. | BA-HPUopt(History - Political Science - Optional Urdu) | 1 | 1 | 2 |
| 7 | Govt. First Grade College, Navangar, Bagalkot Sector No.49, Old Zp., Bagalkot - 587 101 | BA-HGUopt(History-Geography-OptionalUrdu) | 2 | 22 | 24 |
| 8 | Govt. First Grade College, Navabag, Khaza Colony, Bijapur - 586 101 | BA-HEUopt(History - Economics - OptionalUrdu) | 11 | 4 | 15 |
| 9 | Govt. College, Sedam Road, Gulbarga - 585 105. | BA - HSUopt(History - Sociology - Optional Urdu) | 5 | 12 | 17 |
| 10 | Govt. First Grade College, Sedam - 585 222. | BA-HPUopt(History - Political Science - Optional Urdu) | 8 | 6 | 14 |
| 11 | Govt. First Grade College, Chincholi - 585 307 | BA-HEUopt(History - Economics - OptionalUrdu) | 1 | 20 | 21 |
| 12 | Govt. First Grade College for Women, Jewargi Colony- 585 102, Gulbarga | BA-HPUopt(History - Political Science - Optional Urdu) | 0 | 38 | 38 |
| 13 | Govt. First Grade College, Yadgiri - 585 202. | BA-HPUopt(History - Political Science - Optional Urdu) | 2 | 2 | 4 |
| | **Total** | | **36** | **184** | **220** |

## ಕರ್ನಾಟಕ ಸರ್ಕಾರ

ಸಂಖ್ಯೆ: ಇಪಿ 42 ಡಿಜಿಡಬ್ಲ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 12/03/2020.

146
4/5
12/3/20

**ಇವರಿಂದ:-**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
ಶಿಕ್ಷಣ ಇಲಾಖೆ,
ಬೆಂಗಳೂರು.

**ಇವರಿಗೆ:-**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ/ಪರಿಷತ್ತು ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:-** ಮಾನ್ಯ ಕರ್ನಾಟಕ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ [illegible] ರವರ ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ/ನಿಯಮ 424 ಕ್ಕೆ ಉತ್ತರ ಒದಗಿಸುವ ಬಗ್ಗೆ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ/ಶ್ರೀಮತಿ [illegible] ಇವರ ಚುಕ್ಕೆ ಗುರುತಿನ/ರಹಿತ ಪ್ರಶ್ನೆ ಸಂಖ್ಯೆ: 424ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಶೇಖರ) 12/03/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪದವಿ ಪೂರ್ವ ಶಿಕ್ಷಣ)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 424
ಸದಸ್ಯರ ಹೆಸರು : ಶ್ರೀ ರಾಮಸ್ವಾಮಿ ಎ.ಟಿ. (ಅರಕಲಗೂಡು)
ಉತ್ತರಿಸುವ ದಿನಾಂಕ : 12-03-2020.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬಹುತೇಕ ಪದವಿ ಪೂರ್ವ ಕಾಲೇಜುಗಳಲ್ಲಿ ಮತ್ತು ಪ್ರೌಢಶಾಲೆಗಳಲ್ಲಿ ಪ್ರಭಾರ ಪ್ರಾಂಶುಪಾಲರು, ಪ್ರಭಾರಿ ಮುಖ್ಯೋಪಾಧ್ಯಾಯರುಗಳು ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಆ ಹುದ್ದೆಗಳನ್ನು ಭರ್ತಿ ಮಾಡಲು ಏನು ಕ್ರಮಕೈಗೊಳ್ಳಲಾಗಿದೆ; | **ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಉತ್ತರ**<br><br>ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 52 ಡಿಜಿಡಿ 2019 ದಿನಾಂಕ:08/01/2020ರಲ್ಲಿ ಮಾಹಿತಿ ಲಭ್ಯವಿದ್ದ 95 ಅರ್ಹ ಉಪನ್ಯಾಸಕರಿಗೆ ಪ್ರಾಂಶುಪಾಲರ ಹುದ್ದೆಗೆ ಬಡ್ತಿಯನ್ನು ನೀಡಲಾಗಿದೆ.<br><br>ಜುಲೈ 2020ರ ಅಂತ್ಯಕ್ಕೆ ಉದ್ಭವಿಸುವ ಖಾಲಿ ಹುದ್ದೆಗಳನ್ನೊಳಗೊಂಡಂತೆ ಅರ್ಹ ಉಪನ್ಯಾಸಕರಿಗೆ ಪ್ರಾಂಶುಪಾಲರ ಹುದ್ದೆಗೆ ಬಡ್ತಿ ನೀಡಲು ಕ್ರಮವಹಿಸಲಾಗಿದೆ. ಈ ಸಂಬಂಧ ಮಾಹಿತಿಗಳನ್ನು ಸಂಗ್ರಹಿಸಲಾಗುತ್ತಿದೆ.<br><br>**ಪ್ರೌಢ ಶಾಖೆಗೆ ಸಂಬಂಧಿಸಿದ ಉತ್ತರ**<br><br>ಬೆಂಗಳೂರು ವಿಭಾಗದ ಸರ್ಕಾರಿ ಪ್ರೌಢ ಶಾಲಾ ಸಹ ಶಿಕ್ಷಕರ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 06-02-2020ರಂದು ಪ್ರಕಟಿಸಲಾಗಿರುತ್ತದೆ. ದಿನಾಂಕ: 07-02-2020ರಂದು ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರ ವೃಂದದಿಂದ ಸರ್ಕಾರಿ ಪ್ರೌಢ ಶಾಲಾ ಮುಖ್ಯ ಶಿಕ್ಷಕರ ವೃಂದದ ಖಾಲಿ ಹುದ್ದೆಗಳಿಗೆ ಬಡ್ತಿ ನೀಡುವ ಸಂಬಂಧ ಇಲಾಖಾ ಮುಂಬಡ್ತಿ ಸಮಿತಿ ಸಭೆಯು ದಿನಾಂಕ:10-03-2020ರಂದು ನಡೆದಿದ್ದು, ತ್ವರಿತವಾಗಿ ಖಾಲಿ ಇರುವ ಪ್ರೌಢ ಶಾಲಾ ಮುಖ್ಯ ಶಿಕ್ಷಕರುಗಳ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸಲಾಗುವುದು.<br><br>2019-20ನೇ ಸಾಲಿನಲ್ಲಿ ಕಲಬುರ್ಗಿ ಆಯುಕ್ತಾಲಯದ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರಿಗೆ ದಿನಾಂಕ:01-01-2020ರಲ್ಲಿದ್ದಂತೆ ಬಡ್ತಿಗಾಗಿ ನಿಗಧಿಪಡಿಸಿದ, ಒಟ್ಟು 455 ಗ್ರೂಪ್-ಬಿ ವೃಂದದ ಸರ್ಕಾರಿ ಪ್ರೌಢಶಾಲಾ ಮುಖ್ಯ |

| | | |
|---|---|---|
| | | ಶಿಕ್ಷಕರ ಹುದ್ದೆಗಳಿಗೆ ದಿನಾಂಕ:03-01-2020ರಂದು ಬಡ್ತಿ ನೀಡಲಾಗಿದೆ. ಬಡ್ತಿ ಹೊಂದಿದ ಮುಖ್ಯ ಶಿಕ್ಷಕರಿಗೆ ದಿನಾಂಕ:0603-2020ರಂದು ಸ್ಥಳ ನಿಯುಕ್ತಿಗೊಳಿಸಲು ಕೌನ್ಸಿಲಿಂಗ್ ನಡೆಸಲಾಗಿದೆ.<br><br>2019-2020ನೇ ಸಾಲಿನಲ್ಲಿ ಧಾರವಾಡ ಆಯುಕ್ತಾಲಯ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರಿಗೆ ಗ್ರೂಪ್-ಬಿ ವೃಂದದ ಸರ್ಕಾರಿ ಪ್ರೌಢಶಾಲಾ ಮುಖ್ಯೋಪಾಧ್ಯಾಯರ ಒಟ್ಟು 229 ಹುದ್ದೆಗಳಿಗೆ ದಿನಾಂಕ;09-09-2019ರಂದು ಕೌನ್ಸಿಲಿಂಗ್ ಮೂಲಕ ಬಡ್ತಿ ನೀಡಲಾಗಿದೆ.<br><br>ಮುಂದುವರೆದು, ಈಗಾಗಲೇ ಮೈಸೂರು ವಿಭಾಗದ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿದ್ದು ಅಂತಿಮವಾಗಿ ಆಕ್ಷೇಪಣೆಗಳು ಸ್ವೀಕೃತವಾಗಿರುವುದರಿಂದ, ಆಕ್ಷೇಪಣೆಗಳನ್ನು ಸರಿಪಡಿಸಿ, ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ, ತ್ವರಿತವಾಗಿ ಬಡ್ತಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು. |
| ಇ) | ಪ್ರೌಢಶಾಲಾ ವಿದ್ಯಾರ್ಥಿಗಳಂತೆ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿಗಳಿಗೂ ಮಧ್ಯಾಹ್ನದ ಬಿಸಿಯೂಟ ಒದಗಿಸಲು ಸರ್ಕಾರ ಕ್ರಮಕೈಗೊಳ್ಳುವುದೇ; | ಪ್ರಸ್ತಾವನೆ ಸರ್ಕಾರದಲ್ಲಿ ಇರುವುದಿಲ್ಲ. |
| ಈ) | ಶಾಲೆಗಳಲ್ಲಿ ಪಾಠಗಳ ಜೊತೆಗೆ ಪಠ್ಯೇತರ ಚಟುವಟಿಕೆಗಳಿಗೆ ಆದ್ಯತೆ ನೀಡಬೇಕಾಗಿರುವುದರಿಂದ ಕನಿಷ್ಠ ದೈಹಿಕ ಶಿಕ್ಷಕರುಗಳ ನೇಮಕ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವಾಗ ಭರ್ತಿ ಮಾಡಲಾಗುವುದು? (ವಿವರ ನೀಡುವುದು) | • ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಸಂಬಂಧಪಟ್ಟಂತೆ ದೈಹಿಕ ಶಿಕ್ಷಕರ ವೃಂದದ ಒಟ್ಟು 6772 ಹುದ್ದೆ ಮಂಜೂರಾಗಿದ್ದು, ಪ್ರಸ್ತುತ 957 ಶಿಕ್ಷಕರ ಹುದ್ದೆಗಳು ಖಾಲಿ ಇರುತ್ತದೆ. ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಪ್ರಸ್ತಾವನೆ ಸಲ್ಲಿಸಿದ್ದು, ಈ ಸಂಬಂಧ ಆರ್ಥಿಕ ಇಲಾಖೆಯಿಂದ ಕೋರಿರುವ ಕೆಲವು ಮಾಹಿತಿಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಪಡೆಯಲು ಕ್ರಮವಹಿಸಲಾಗುತ್ತಿದೆ.<br>• ಸರ್ಕಾರಿ ಪ್ರೌಢ ಶಾಲೆಗಳಿಗೆ ಸಂಬಂಧಿಸಿದಂತೆ, ಖಾಲಿ ಇರುವ 441 ದೈಹಿಕ ಶಿಕ್ಷಣ ಶಿಕ್ಷಕರ ಹುದ್ದೆಗಳಲ್ಲಿ ನೇರ ನೇಮಕಾತಿಗಾಗಿ ಮೀಸಲಿರಿಸಿದ 331 ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಸಹಮತಿ ಕೋರಿ ಆರ್ಥಿಕ ಇಲಾಖೆಗೆ ಕಳುಹಿಸಲಾಗುತ್ತಿದೆ. |

ಸಂಖ್ಯೆ: ಇಪಿ 42 ಡಿಜಿಡಬ್ಲ್ಯೂ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

# ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 06 ಎಂಎಲ್ಎ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 11.03.2020.

ಇಂದ:

ಸರ್ಕಾರದ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

1HH
U/S
10/3/20

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಕುಮಾರ್ ಡಿ.ಕೆ. (ಕನಕಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ರ ಬಗ್ಗೆ.

****

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಶಿವಕುಮಾರ್ ಡಿ.ಕೆ. (ಕನಕಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ಕ್ಕೆ ದಿನಾಂಕ: 10.03.2020 ರಂದು ಮಾನ್ಯ ಜಲಸಂಪನ್ಮೂಲ ಸಚಿವರು ಉತ್ತರಿಸಬೇಕಿದ್ದು, ಸದರಿ ಪ್ರಶ್ನೆಗೆ ಉತ್ತರಗಳನ್ನು ಸಿದ್ಧಪಡಿಸಿ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,
Shubha K 11/03/2020
(ಶುಭಾ ಕೆ.),
ತಾಂತ್ರಿಕ ಸಹಾಯಕರು (ತಾಂತ್ರಿಕ-6),
ಜಲಸಂಪನ್ಮೂಲ ಇಲಾಖೆ.

ಪ್ರತಿಯನ್ನು:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು.
4. ಸರ್ಕಾರದ ಹೆಚ್ಚುವರಿ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ, ಬೆಂಗಳೂರು
5. ಸರ್ಕಾರದ ಉಪ ಕಾರ್ಯದರ್ಶಿ, ಕೃಭಾಜನಿ/ ಸೇವೆಗಳು, ಇವರ ಆಪ್ತ ಸಹಾಯಕರು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
6. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಬಿ), ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 34
ಸದಸ್ಯರ ಹೆಸರು : ಶ್ರೀ ಶಿವಕುಮಾರ್ ಡಿ.ಕೆ (ಕನಕಪುರ)
ಉತ್ತರಿಸಬೇಕಾದ ದಿನಾಂಕ : 10.03.2020
ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರಮ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಹಿಂದಿನ ಸರ್ಕಾರದಲ್ಲಿ ಜಲ ಸಂಪನ್ಮೂಲ ಇಲಾಖೆಗೆ ಮಂಜೂರಾದ ಯೋಜನೆಗಳು ಮತ್ತು ಕಾಮಗಾರಿಗಳಿಗೆ ಶೀರ್ಷಿಕೆವಾರು ನಿಗದಿಗೊಳಿಸಿದ ಅನುದಾನವೆಷ್ಟು; (ವಿಧಾನಸಭಾ ಕ್ಷೇತ್ರವಾರು ವಿವರ ಒದಗಿಸುವುದು) | ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ. | ಮಂಜೂರಾದ ಕಾಮಗಾರಿಗಳಲ್ಲಿ ಎಷ್ಟು ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದೆ. (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು). | ಹಿಂದಿನ ಸರ್ಕಾರದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿರುವ ಯೋಜನೆಗಳ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |
| ಇ. | ಸದರಿ ಕಾಮಗಾರಿಗಳು ಯಾವ ಯಾವ ಹಂತದಲ್ಲಿದೆ ಹಾಗೂ ಬಿಡುಗಡೆಯಾದ ಅನುದಾನದಲ್ಲಿ ಖರ್ಚಾಗಿರುವ ಅನುದಾನವೆಷ್ಟು; (ವಿಧಾನಸಭಾ ಕ್ಷೇತ್ರವಾರು ವಿವರ ಒದಗಿಸುವುದು) | |
| ಈ. | ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿ ಮಂಜೂರಾದ ಕಾಮಗಾರಿಗಳು ಯಾವ ಹಂತದಲ್ಲಿವೆ; (ವಿವರ ಒದಗಿಸುವುದು) | ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಕಾಮಗಾರಿಗಳು ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತವೆ. |
| ಉ. | ದಿನಾಂಕ: 23.08.2019 ರಂದು ನೂತನ ಸರ್ಕಾರ ಅಸ್ತಿತ್ವಕ್ಕೆ ಬಂದ ನಂತರ ಸ್ಥಗಿತಗೊಂಡಿರುವ ಕಾಮಗಾರಿಗಳೆಷ್ಟು; (ಶೀರ್ಷಿಕೆವಾರು ವಿವರ ಒದಗಿಸುವುದು). | ದಿನಾಂಕ 20.09.2019 ರಂದು ನಡೆದ ಕಾವೇರಿ ನೀರಾವರಿ ನಿಗಮದ 70 ನೇ ನಿಗಮ ಮಂಡಳಿಯ ಸಭೆಯ ನಿರ್ಣಯದಂತೆ ಒಟ್ಟಾರೆ ರೂ. 6808.60 ಕೋಟಿ ಮೊತ್ತದ 5369 ಕಾಮಗಾರಿಗಳನ್ನು ಸ್ಥಗಿತಗೊಳಿಸಲಾಗಿರುತ್ತದೆಂದು ವ್ಯವಸ್ಥಾಪಕ ನಿರ್ದೇಶಕರು, ಕಾ.ನೀ.ನಿ.ನಿ ರವರು ವರದಿಸಿರುತ್ತಾರೆ. |
| ಊ. | ಯಾವ ಕಾರಣಕ್ಕಾಗಿ ಕಾಮಗಾರಿಗಳನ್ನು ಸ್ಥಗಿತಗೊಳಿಸಲಾಗಿದೆ? (ವಿವರ ನೀಡುವುದು) | 2018-19 ನೇ ವಾರ್ಷಿಕ ಸಾಲಿನ ಕಾರ್ಯಕ್ರಮ ಪಟ್ಟಿಯಲ್ಲಿ ಅನುಮೋದನೆಗೊಂಡು 2019-20 ನೇ ಸಾಲಿಗೆ ಮುಂದುವರೆದ ಕಾಮಗಾರಿಗಳಿಗೆ ಅವಶ್ಯ ಅನುದಾನ ಲಭ್ಯವಿಲ್ಲದ ಕಾರಣ, ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ಆರ್ಥಿಕ ಶಿಸ್ತು ಕಾಯ್ದುಕೊಳ್ಳುವ ಹಿತದೃಷ್ಟಿಯಿಂದ ಇನ್ನೂ ಅನುಷ್ಠಾನಗೊಳ್ಳದೆ ವಿವಿಧ ಪ್ರಕ್ರಿಯೆಯಲ್ಲಿರುವ ಕಾಮಗಾರಿಗಳನ್ನು ದಿನಾಂಕ 20.09.2019 ರಂದು ನಡೆದ ಕಾವೇರಿ ನೀರಾವರಿ ನಿಗಮ ಮಂಡಳಿಯ 70 ನೇ ಸಭೆಯ ನಿರ್ಣಯದಂತೆ ಸ್ಥಗಿತಗೊಳಿಸಲಾಗಿದೆ. |

ಜಸಂಇ 06 ಎಂಎಲ್ಎ 2020

(ರಮೇಶ್ ಲ ಜಾರಕಿಹೊಳಿ),
ಜಲಸಂಪನ್ಮೂಲ ಸಚಿವರು.

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಕುಮಾರ್ ಡಿ.ಕೆ (ಕನಕಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ಕ್ಕೆ ಉತ್ತರಗಳು

ಅನುಬಂಧ-1

(ರೂ. ಲಕ್ಷಗಳಲ್ಲಿ)

| ವಿವರಗಳು | | ಒಟ್ಟು | |
|---|---|---|---|
| | | ಆಯವ್ಯಯ ಅನುದಾನ | ಪರಿಷ್ಕೃತ ಅನುದಾನ |
| ಎಐಬಿಪಿ | | 13080.00 | 13080.00 |
| ಬಂಡವಾಳ ವೆಚ್ಚ | | 595290.00 | 667910.00 |
| ಕೆ.ಬಿ.ಜೆ.ಎನ್.ಎಲ್ L/A charges and R & R | | 105020.00 | 82400.00 |
| ವಿಶೇಷ ಅಭಿವೃದ್ಧಿ ಯೋಜನೆ | | 43396.00 | 43396.00 |
| ಎಸ್.ಸಿ.ಪಿ | ಎಐಬಿಪಿ | 5500.00 | 5500.00 |
| | ಬಂಡವಾಳ | 100358.00 | 100358.00 |
| | ಎಲ್.ಎ.ಕ್ಯೂ | 41107.00 | 20107.00 |
| | Unspent | 0.00 | 0.00 |
| ಟಿ.ಎಸ್.ಪಿ | ಎಐಬಿಪಿ | 3500.00 | 3500.00 |
| | ಬಂಡವಾಳ | 74567.00 | 74567.00 |
| | ಎಲ್.ಎ.ಕ್ಯೂ | 13873.00 | 4873.00 |
| | Unspent | 0.00 | 0.00 |
| ನಬಾರ್ಡ್ | | 3150.00 | 2008.95 |
| ಡ್ರಿಪ್ | | 9336.00 | 3819.00 |
| KISWRMIP & EAP | | 17158.00 | 10008.83 |
| ನಿರ್ವಹಣೆ | | 27924.00 | 20980.00 |
| ಸಾಲ ಮರುಪಾವತಿ (Interest) | | 174123.00 | 162542.00 |
| ಸಾಲ ಮರುಪಾವತಿ (Principal) | | 77423.00 | 77423.00 |
| Guarantee Commission | | 19394.00 | 18132.75 |
| ಐಇಬಿಆರ್ | | 350000.00 | 350000.00 |
| ನಿಗಮೇತರ ವಲಯಗಳು | | 14917.00 | 13011.68 |
| ಕಾಡಾ | | 32115.80 | 24808.21 |
| ಒಟ್ಟು | | 1721231.80 | 1698425.42 |

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಕುಮಾರ್ ಡಿ.ಕೆ (ಕನಕಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ಕ್ಕೆ ಉತ್ತರಗಳು

ಅನುಬಂಧ-2

(ರೂ. ಕೋಟಿಗಳಲ್ಲಿ)

| ಕ್ರ.ಸಂ | ವಿಷಯ | ಆದೇಶ ಸಂಖ್ಯೆ ಮತ್ತು ದಿನಾಂಕ | ಕಾಮಗಾರಿಯ ಮೊತ್ತ | ಪ್ರಸ್ತುತ ಹಂತ |
|---|---|---|---|---|
| 1 | ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ-2ರ ನಾರಾಯಣಪುರ ಬಲದಂಡೆ ಕಾಲುವೆ ಕಿ.ಮೀ.0.00 ರಿಂದ 95.00 ರವರೆಗಿನ ಕಾಲುವೆ ಜಾಲದ ಆಧುನೀಕರಣ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ | ಜಸಂಇ 41 ಕೆಬಿಎನ್ 2019 ದಿನಾಂಕ: 08.03.2019 | 750.00 | ಕಾಮಗಾರಿಗೆ ಗುತ್ತಿಗೆ ವಹಿಸಲಾಗಿದ್ದು, ಪ್ರಗತಿಯಲ್ಲಿದೆ. |
| 2 | ಘಟಪ್ರಭಾ ಎಡದಂಡೆ ಕಾಲುವೆಯ ಆಧುನೀಕರಣ | ಜಸಂಇ 46 ಎನ್ಐಎನ್ 2016, ದಿನಾಂಕ: 06.12.2018 | 573.28 | ಕಾಮಗಾರಿ ಪ್ರಗತಿಯಲ್ಲಿದೆ. |
| 3 | ಬೆಳಗಾವಿ ತಾಲ್ಲೂಕಿನ ಬಾಗೇವಾಡಿ ಮತ್ತು ಸಾಂಬ್ರ ಹೋಬಳಿಗಳಲ್ಲಿ ಬರುವ 47 ಹಳ್ಳಿಗಳ 62 ಕೆರೆಗಳಿಗೆ ಹಿರೇಹಟ್ಟಿಹೊಳಿ ಗ್ರಾಮದ ಹತ್ತಿರ ಮಲಪ್ರಭಾ ನದಿಯಿಂದ ನೀರನ್ನೆತ್ತಿ ತುಂಬಿಸುವ ರೂ.379.92 ಕೋಟಿಗಳ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ | ಜಸಂಇ 66 ಎಂಪಿಜೆಡ್ 2018, ದಿನಾಂಕ: 16.01.2019 | 379.92 | ಕಾಮಗಾರಿ ಪ್ರಗತಿಯಲ್ಲಿದೆ. |
| 4 | ಬೆಳಗಾವಿ ಜಿಲ್ಲೆ ಮತ್ತು ತಾಲ್ಲೂಕಿನ ಹಿಂಗರಗಿ ಹೋಬಳಿಯ 21 ಗ್ರಾಮಗಳಿಗೆ ಕುಡಿಯುವ ನೀರಿನ ಸೌಲಭ್ಯ ಒದಗಿಸುವುದನ್ನು ಒಳಗೊಂಡಂತೆ ಹಾಲಿ 13 ಸಣ್ಣ ನೀರಾವರಿ/ಜಿಲ್ಲಾ ಪಂಚಾಯತ್ ಕೆರೆಗಳನ್ನು ಕಲ್ಲೇಹೋಳ್ ಗ್ರಾಮದ ಹತ್ತಿರ ಮಾರ್ಕಂಡೇಯ ನದಿಯಿಂದ 0.162 ಟಿ.ಎಂ.ಸಿ. ನೀರನ್ನೆತ್ತಿ ತುಂಬಿಸುವ ಯೋಜನೆಯ ರೂ.143.53 ಕೋಟಿಗಳ ವಿವರವಾದ ಯೋಜನಾ ವರದಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ | ಜಸಂಇ 10 ಎಂಪಿಜೆಡ್ 2019, ದಿನಾಂಕ: 03.01.2019 | 143.53 | ಅಂದಾಜು ಪಟ್ಟಿ ಮತ್ತು ಡಿಟಿಪಿ ತಯಾರಿಕಾ ಹಂತದಲ್ಲಿದೆ. |
| 5 | ಆನೆಕೆರೆ ಶಂಭುದೇವರ ಕೆರೆಯಿಂದ ನೀರನ್ನು ಎತ್ತಿ ಚನ್ನರಾಯಪಟ್ಟಣ ತಾಲ್ಲೂಕು ದಂಡಿಗನ ಹೋಬಳಿಯ ಆಲಗೊಂಡನಹಳ್ಳಿ ಏತ ನೀರಾವರಿ ಯೋಜನೆಯ ಅಡಿಯಲ್ಲಿ ಬರುವ 300 ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸಲು ಹಾಗೂ ಚನ್ನರಾಯಪಟ್ಟಣ ತಾಲ್ಲೂಕು ದಂಡಿಗನಹಳ್ಳಿ ಹೋಬಳಿ ವ್ಯಾಪ್ತಿಯ 26 ಕೆರೆಗಳನ್ನು ಕುಡಿಯುವ ನೀರಿಗಾಗಿ ತುಂಬಿಸುವ ಯೋಜನೆ | ಜಸಂಇ 76 ಎನ್‌ಹೆಚ್‌ಪಿ 2017, ದಿನಾಂಕ: 26.06.2018 | 47.00 | ಕಾಮಗಾರಿ ಪ್ರಗತಿಯಲ್ಲಿದೆ. |
| 6 | ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು ಕಟ್ಟೆಬೆಳಗುಳಿ ಸಮೀಪ ಹೇಮಾವತಿ ನದಿಗೆ ಅಡ್ಡಲಾಗಿ ಕಟ್ಟಿರುವ ಶ್ರೀ ರಾಮದೇವರ ಅಣೆಕಟ್ಟೆಯನ್ನು ಪುನರ್ ನಿರ್ಮಾಣ ಮಾಡುವ ಮತ್ತು ಇನ್ನಿತರೆ ಅಭಿವೃದ್ಧಿ ಕಾಮಗಾರಿ | ಜಸಂಇ 55 ಎನ್‌ಹೆಚ್‌ಪಿ 2018, ದಿನಾಂಕ: 06.08.2018 | 122.00 | ಕಾಮಗಾರಿ ಪ್ರಗತಿಯಲ್ಲಿದೆ. |
| 7 | ಮದ್ದೂರು ತಾಲ್ಲೂಕು ತಗ್ಗಹಳ್ಳಿ ಅಣೆಕಟ್ಟಿನ ಹಿನ್ನೀರನ್ನು ಏತ ನೀರಾವರಿ ಯೋಜನೆ ಮೂಲಕ ಮದ್ದೂರು ತಾಲ್ಲೂಕಿನ ಆತಗೂರು ಹೋಬಳಿಯಲ್ಲಿ ಬರುವ 17 ಕೆರೆಗಳಿಗೆ ಹಾಗೂ ಕುಣಿಗಲ್ ತಾಲ್ಲೂಕಿನ 3 ಕೆರೆಗಳಿಗೆ ನೀರು ತುಂಬಿಸುವ ಯೋಜನೆ | ಜಸಂಇ 39 ಎಂಎಂಕೆ 2018, ದಿನಾಂಕ: 28.09.2018 | 45.00 | ಟೆಂಡರ್ ಪ್ರಕ್ರಿಯೆಯಲ್ಲಿದೆ. |

| 8 | ಬಾಗೂರು ನವಿಲೆ ಸುರಂಗ ನಿರ್ಗಮನದ ಕಾಲುವೆಯಿಂದ ನೀರನ್ನು ಎತ್ತಿ ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ಬಾಗೂರು ಹೋಬಳಿಯ 19 ಕೆರೆಗಳನ್ನು ಕುಡಿಯುವ ನೀರಿಗಾಗಿ ತುಂಬಿಸುವ ಯೋಜನೆ (ಕಲ್ಲೇಸೋಮನಹಳ್ಳಿ) | ಜಸಂಇ 13 ಎನ್‌ಹೆಚ್‌ಪಿ 2017, ದಿನಾಂಕ: 23.11.2018 | 32.00 | ಕಾಮಗಾರಿ ಪ್ರಗತಿಯಲ್ಲಿದೆ. |
|---|---|---|---|---|
| 9 | ರಾಮನಗರ ಜಿಲ್ಲೆ ರಾಮನಗರ ತಾಲ್ಲೂಕಿನ ಬೈರಮಂಗಲ ಜಲಾಶಯಕ್ಕೆ ಡೈವರ್ಷನ್ ಕಾಲುವೆ ಮತ್ತು ವಿಯರ್ ನಿರ್ಮಿಸುವ ಯೋಜನೆ | ಜಸಂಇ 157 ಎಂಎಂಕೆ 2018, ದಿನಾಂಕ: 23.11.2018 | 110.00 | ಕಾಮಗಾರಿ ಪ್ರಗತಿಯಲ್ಲಿದೆ. |
| 10 | ರಾಮನಗರ ಜಿಲ್ಲೆ, ಚನ್ನಪಟ್ಟಣ, ರಾಮನಗರ, ಮಾಗಡಿ ಮತ್ತು ಕನಕಪುರ ತಾಲ್ಲೂಕುಗಳಿಗೆ ಕುಡಿಯುವ ನೀರು ಸರಬರಾಜು ಮಾಡಲು ಸತ್ತೇಗಾಲದ ಸಮೀಪದಲ್ಲಿ ಕಾವೇರಿ ನದಿಯಿಂದ ಇಗ್ಗಲೂರು ಹತ್ತಿರದ ಹೆಚ್.ಡಿ.ದೇವೇಗೌಡ ಬ್ಯಾರೇಜಿಗೆ ಗುರುತ್ವಾಕರ್ಷಣೆ ಮೂಲಕ ನೀರು ಹರಿಸುವ ಯೋಜನೆ | ಜಸಂಇ 13 ಎಂಎಂಕೆ 2018, ದಿನಾಂಕ: 23.11.2018 | 540.00 | ಕಾಮಗಾರಿ ಪ್ರಗತಿಯಲ್ಲಿದೆ. |
| 11 | ಮೈಸೂರು ಜಿಲ್ಲೆ ಕೆ.ಆರ್ ನಗರ ತಾಲ್ಲೂಕಿನ ಹಾಡ್ಯ ಗ್ರಾಮದ ಬಳಿ ಕಾವೇರಿ ನದಿಯಿಂದ ಲಿಫ್ಟ್ ಮುಖೇನ ನೀರನ್ನು ಎತ್ತಿ ಕೆ.ಆರ್.ನಗರ ತಾಲ್ಲೂಕಿನ 12 ಕೆರೆಗಳನ್ನು ಕುಡಿಯುವ ನೀರಿಗಾಗಿ ತುಂಬಿಸುವ ಯೋಜನೆ | ಜಸಂಇ 16 ಎಂಎಂಕೆ 2017, ದಿನಾಂಕ: 06.12.2018 | 15.00 | ಕಾಮಗಾರಿ ಪ್ರಗತಿಯಲ್ಲಿದೆ. |
| 12 | ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಹಾರಕೆರೆ ಬಳಿ ಕಾವೇರಿ ನದಿಗೆ ಅಡ್ಡಲಾಗಿ ಸೇತುವೆ ನಿರ್ಮಾಣ ಮಾಡುವ ಕಾಮಗಾರಿ | ಜಸಂಇ 176 ಎಂಎಂಕೆ 2016, ದಿನಾಂಕ: 06.12.2018 | 78.13 | ಕಾಮಗಾರಿ ಪ್ರಗತಿಯಲ್ಲಿದೆ. |
| 13 | ಹೊಳೆನರಸೀಪುರ ತಾಲ್ಲೂಕು ಮಾವಿನಕೆರೆ ಗ್ರಾಮದ ಹತ್ತಿರ ಹೇಮಾವತಿ ನದಿಯಿಂದ ನೀರನ್ನು ಎತ್ತಿ ಹಾಸನ ತಾಲ್ಲೂಕಿನ ದುದ್ದ ಹಾಗೂ ಶಾಂತಿಗ್ರಾಮ ಹೋಬಳಿಗಳ 160 ಕೆರೆಗಳು ಹಾಗೂ 10 ಕಟ್ಟೆಗಳಿಗೆ ಕುಡಿಯುವ ನೀರಿಗಾಗಿ ನೀರನ್ನು ಹರಿಸುವ ಯೋಜನೆ | ಜಸಂಇ 120 ಎನ್‌ಹೆಚ್‌ಪಿ 2018, ದಿನಾಂಕ: 28.09.2018 | 333.00 | ಕಾಮಗಾರಿ ಪ್ರಗತಿಯಲ್ಲಿದೆ. |
| 14 | ಹಾಸನ ಜಿಲ್ಲೆಯ ಹೊಳೆನರಸೀಪುರ ತಾಲ್ಲೂಕಿನ ಚಾಕೇನಹಳ್ಳಿ ಏರಿಗೆ ಹೇಮಾವತಿ ನದಿಯಿಂದ 140 ಎಂ.ಸಿ.ಎಫ್.ಟಿ ನೀರನ್ನು ಎತ್ತಿ ಕುಡಿಯುವ ನೀರಿಗಾಗಿ ನೀರು ತುಂಬಿಸುವುದು ಹಾಗೂ ಒಂಟಿಗುಡ್ಡ ಏತ ನೀರಾವರಿ ಯೋಜನೆಯ ನಾಲೆ ನಿರ್ಮಾಣ ಕಾಮಗಾರಿ | ಜಸಂಇ 14 ಎನ್‌ಹೆಚ್‌ಪಿ 2019, ದಿನಾಂಕ: 30.05.2019 | 54.00 | ಕಾಮಗಾರಿ ಪ್ರಗತಿಯಲ್ಲಿದೆ. |
| 15 | ಹೇಮಾವತಿ ಯೋಜನೆಯ ತುಮಕೂರು ಶಾಖಾ ನಾಲೆಯ ಸರಪಳಿ:70.00 ಕಿ.ಮೀ ನಿಂದ 165.60 ಕಿ.ಮೀ ವರೆಗೂ ಸಂಪರ್ಕ ಕಲ್ಪಿಸುವ ಪೈಪ್ ಲೈನ್ ಕಾಮಗಾರಿ | ಜಸಂಇ 05 ಎನ್‌ಹೆಚ್‌ಪಿ 2019, ದಿನಾಂಕ: 26.06.2019 | 614.00 | ಕೈಬಿಡಲಾಗಿದೆ. ಇದರ ಬದಲಾಗಿ ಹೇಮಾವತಿ ಯೋಜನೆಯ ತುಮಕೂರು ಶಾಖಾ ನಾಲೆಯ ಸರಪಳಿ:70.36 ಕಿ.ಮೀ ನಿಂದ 166.90 ಕಿ.ಮೀ ವರೆಗೂ ಹಾಲಿ ಇರುವ ನಾಲೆಯ ಆಧುನೀಕರಣಗೊಳಿಸುವ ಕಾಮಗಾರಿಯ ರೂ.550 ಕೋಟಿ ಮೊತ್ತದ ಯೋಜನಾ ವರದಿಯನ್ನು ಸರ್ಕಾರಕ್ಕೆ ಆಡಳಿತಾತ್ಮಕ ಅನುಮೋದನೆ ಕೋರಿ ಸಲ್ಲಿಸಲಾಗಿದೆ. |

| | | | | |
|---|---|---|---|---|
| 16 | ಹೇಮಾವತಿ ಬಲಮೇಲ್ದಂಡೆ ನಾಲಾ ಸರಪಳಿ: 0.00 ಕಿ.ಮೀ ನಿಂದ 96.812 ಕಿ.ಮೀ ವರೆಗೆ ಆಧುನೀಕರಣ ಕಾಮಗಾರಿ | ಜಸಂಇ 197 ಎನ್‌ಹೆಚ್‌ಪಿ 2017, ದಿನಾಂಕ: 11.01.2019 | 380.07 | ಕಾಮಗಾರಿ ಪ್ರಗತಿಯಲ್ಲಿದೆ. |
| 17 | ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ದಂಡಿಗನಹಳ್ಳಿ ಹೋಬಳಿಯ ಕುಂಬೇನಹಳ್ಳಿ ಗ್ರಾಮದ ಬಳಿ ಹೇಮಾವತಿ ನದಿಯಿಂದ 18 ಕ್ಯೂಸೆಕ್ಸ್ (177.47 ಎಂ.ಸಿ.ಎಫ್.ಟಿ) ನೀರನ್ನು ಆನೆಕೆರೆ ಶಂಭುದೇವರ ಕೆರೆ ತುಂಬಿಸುವ ಯೋಜನೆ | ಜಸಂಇ 03 ಎನ್‌ಹೆಚ್‌ಪಿ 2019, ದಿನಾಂಕ: 01.02.2019 | 26.00 | ಕಾಮಗಾರಿ ಪ್ರಗತಿಯಲ್ಲಿದೆ. |
| 18 | ಹೇಮಾವತಿ ಯೋಜನೆ ತುಮಕೂರು ಶಾಖಾ ನಾಲೆ ಕಿ.ಮೀ 105.725 ರಿಂದ ಗುರುತ್ವಾಕರ್ಷಣ ಕೊಳವೆಗಳ ಮೂಲಕ ತುಮಕೂರು ಜಿಲ್ಲೆಯ ಗುಬ್ಬಿ ಮತ್ತು ಶಿರಾ ತಾಲ್ಲೂಕಿನ 42 ಗ್ರಾಮಗಳ ಕುಡಿಯುವ ನೀರಿನ ಬೇಡಿಕೆಯನ್ನು ಹಾಗಲವಾಡಿ ಹೋಬಳಿ ಮಂಚಲದೊರೆ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಮಠದಹಳ್ಳಿ ಮತ್ತು ಇತರ ಕೆರೆಗಳಿಗೆ ನೀರೂದಗಿಸುವ ಯೋಜನೆ | ಜಸಂಇ 43 ಎನ್‌ಹೆಚ್‌ಪಿ 2018 ದಿನಾಂಕ: 08.03.2019 | 25.65 | ಸದರಿ ಕಾಮಗಾರಿಯು ಟೆಂಡರ್ ಹಂತದಲ್ಲಿದೆ. ಪ್ರಸ್ತುತ ಆರ್ಥಿಕ ವರ್ಷದಲ್ಲಿ ನಿಗಮದ ಕಾರ್ಯಭಾರ ಅಧಿಕವಾಗಿರುವುದರಿಂದ ಸದರಿ ಕಾಮಗಾರಿಯನ್ನು ತಡೆಹಿಡಿಯಲು ಸರ್ಕಾರದಿಂದ ಸೂಚಿಸಲಾಗಿದೆ |
| 19 | ಹೇಮಾವತಿ ಯೋಜನೆಯ ತುಮಕೂರು ಶಾಖಾ ನಾಲೆಯ ಸರಪಳಿ:0.00 ಕಿ.ಮೀ ರಿಂದ 70.00 ಕಿ.ಮೀ ವರೆಗೆ ಹಾಗೂ ವೈ-ನಾಲೆಯ ಸರಪಳಿ: 15:727 ಕಿ.ಮೀ. ನಿಂದ 21.175 ಕಿ.ಮೀ ವರೆಗೆ ರೀ- ಮಾಡಲಿಂಗ್ ಯೋಜನೆ | ಜಸಂಇ 4 ಎನ್‌ಹೆಚ್‌ಪಿ 2019 ದಿನಾಂಕ: 01.07.2019 | 475.00 | ಕಾಮಗಾರಿ ಪ್ರಾರಂಭಿಸಲಾಗಿದೆ |
| 20 | ಹೇಮಾವತಿ ಬಲದಂಡೆ ನಾಲಾ ಸರಪಳಿ:0.00 ಕಿ.ಮೀ. ನಿಂದ 92.104 ಕಿ.ಮೀ ವರೆಗೆ ಆಧುನೀಕರಣ ಕಾಮಗಾರಿ | ಜಸಂಇ 1 ಎನ್‌ಹೆಚ್‌ಪಿ 2019 ದಿನಾಂಕ: 18.07.2019 | 422.75 | ಕಾಮಗಾರಿ ಪ್ರಗತಿಯಲ್ಲಿದೆ. |
| 21 | ಕಾಚೇನಹಳ್ಳಿ ಏತ ನೀರಾವರಿ ಯೋಜನೆಯ ಮೂರನೇ ಹಂತದ ಕಾಮಗಾರಿ | ಜಸಂಇ 2 ಎನ್‌ಹೆಚ್‌ಪಿ 2019 ದಿನಾಂಕ: 28.02.2019 | 141.50 | ಟೆಂಡರ್ ಪ್ರಕ್ರಿಯೆಯಲ್ಲಿದೆ. |
| 22 | ಮದ್ದೂರು ತಾಲ್ಲೂಕಿನ ಹೆಬ್ಬಳ್ಳದಿಂದ 0.36 ಟಿ.ಎಂ.ಸಿ ನೀರನ್ನು ಎತ್ತಿ ಹೊಸ ಮದ್ದೂರು ಶಾಖಾ ಕಾಲುವೆಯ 47ನೇ ಕಿ.ಮೀ.ನ ಮುಂದೆ ಬರುವ ಭಾವಿತ ಅಚ್ಚುಕಟ್ಟಿಗೆ ನೀರನ್ನು ಒದಗಿಸುವ ಯೋಜನೆ | ಜಸಂಇ 166 ಎಂಎಂಕೆ 2018 ದಿನಾಂಕ: 28.02.2019 | 17.74 | ಟೆಂಡರ್ ಪ್ರಕ್ರಿಯೆಯಲ್ಲಿದೆ. |
| 23 | ಹೇಮಾವತಿ ನದಿಯಿಂದ ಗುಡ್ಡೇಹೊಸಹಳ್ಳಿ ಗ್ರಾಮದ ಬಳಿಯಿಮದ ಲಿಫ್ಟ್ ಮುಖೇನ ನೀರನ್ನು ಎತ್ತಿ ಕೆ.ಆರ್.ಪೇಟೆ, ನಾಗಮಂಗಲ ಹಾಗೂ ಚನ್ನರಾಯಪಟ್ಟಣ ತಾಲ್ಲೂಕಿನ ಕೆರೆಗಳನ್ನು ಕುಡಿಯುವ ನೀರಿಗಾಗಿ ತುಂಬಿಸುವ ಯೋಜನೆ | ಜಸಂಇ 38 ಎಂಎಂಕೆ 2018 ದಿನಾಂಕ: 21.01.2019 | 212.00 | ಕಾಮಗಾರಿ ಪ್ರಗತಿಯಲ್ಲಿದೆ. |
| 24 | ಸೋಮವಾರಪೇಟೆ ತಾಲ್ಲೂಕಿನ ಕಟ್ಟೇಪುರ ಗ್ರಾಮದ ಬಳಿ ಹೇಮಾವತಿ ನದಿಯಿಂದ ನೀರನ್ನು ಎತ್ತಿ ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ಕಸಬಾ, ಮಲ್ಲಿಪಟ್ಟಣ, ಕೊಣನೂರು, ದೊಡ್ಡಮಗ್ಗೆ ಹೋಬಳಿಯ ಗ್ರಾಮಗಳ 150 ಕೆರೆಗಳು ಹಾಗೂ 50 ಕಟ್ಟೆಗಳಿಗೆ ಕುಡಿಯುವ ನೀರಿಗಾಗಿ ತುಂಬಿಸುವ ಯೋಜನೆ | ಜಸಂಇ 11 ಎಂಎಂಕೆ 2019 ದಿನಾಂಕ: 01.03.2019 | 190.00 | ಕಾಮಗಾರಿ ಪ್ರಗತಿಯಲ್ಲಿದೆ. |
| 25 | ಹಾಸನ ಜಿಲ್ಲೆಯ ಹೊಳೆನರಸೀಪುರ ತಲ್ಲೂಕಿನ ಚಾಕೇನಹಳ್ಳಿ ಕೆರೆಗೆ ಹೇಮಾವತಿ ನದಿಯುಂದ 140 ಎಂ.ಸಿ.ಎಫ್.ಟಿ. ನೀರನ್ನು ಎತ್ತಿ ಕುಡಿಯುವ ನೀರಿಗಾಗಿ ನೀರು ತುಂಬಿಸುವುದು ಹಾಗೂ ಹಂಚಿಗುಡ್ಡ ಏತ ನೀರಾವರಿ ಯೋಜನೆಯ ನಾಲೆಯ ನಿರ್ಮಾಣ ಕಾಮಗಾರಿ | ಜಸಂಇ 14 ಎನ್‌ಹೆಚ್‌ಪಿ 2019 ದಿನಾಂಕ: 30.05.2019 | 54.00 | ಕಾಮಗಾರಿ ಪ್ರಗತಿಯಲ್ಲಿದೆ. |

| 26 | ವಿಶ್ವೇಶ್ವರಯ್ಯ ನಾಲಾ ಜಾಲದ 2ನೇ ಹಂತದ ನಾಲ್ಕು ಪ್ಯಾಕೇಜ್‌ಗಳಾದ (1) ವಿಶ್ವೇಶ್ವರಯ್ಯ ನಾಲಾ ಜಾಲದ ಮುಖ್ಯ ಕಾಲುವೆ ಮತ್ತು ಅದರ ವಿತರಣಾ ಕಾಲುವೆಗಳು, ಪಿಕ್‌ಅಪ್ ನಾಲೆಗಳು ಹಾಗೂ ಎಲ್.ಬಿ.ಎಲ್.ಎಲ್. ವಿತರಣಾ ನಾಲೆಗಳ ಆಧುನೀಕರಣ ಕಾಮಗಾರಿ, (2) ವಿಶ್ವೇಶ್ವರಯ್ಯ ನಾಲಾ ಜಾಲದಡಿ ಎಲ್.ಬಿ.ಎಲ್.ಎಲ್. ವಿತರಣಾ ನಾಲೆಗಳ ಆಧುನೀಕರಣ ಕಾಮಗಾರಿ (3) ವಿಶ್ವೇಶ್ವರಯ್ಯ ನಾಲಾ ಜಾಲದಡಿ ಸಂಪರ್ಕ ನಾಲೆಯ ಮುಖ್ಯ ನಾಲೆ ಮತ್ತು ಅದರಡಿ ಬರುವ ವಿತರಣಾ ನಾಲೆಗಳ ಆಧುನೀಕರಣ ಕಾಮಗಾರಿ ಹಾಗೂ (4) ಹಳೆ ಮದ್ದೂರು ಶಾಖಾ ನಾಲೆಯ ವಿತರಣಾ ನಾಲೆಗಳ ಮತ್ತು ಪಿಕಪ್‌ಗಳ ಅಭಿವೃದ್ಧಿ ಕಾಮಗಾರಿ | ಜಸಂಇ 29 ಎಂಎಂಕೆ 2019 ದಿನಾಂಕ: 07.03.2019 | 522.37 | ರೂ300 ಕೋಟಿ ಮೊತ್ತಗಳಿಗೆ ಸರ್ಕಾರದಿಂದ ಅನುಮೋದನೆ ದೊರೆತಿದ್ದು ಪ್ಯಾಕೇಜ್ (1) ರ ಅಡಿಯಲ್ಲಿ ಬರುವ ವಿಶ್ವೇಶ್ವರಯ್ಯ ನಾಲಾ ಜಾಲದ ಮುಖ್ಯ ಕಾಲುವೆಯ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. ಇನ್ನುಳಿದ ರೂ 222.37 ಕೋಟಿಗಳ ಮೊತ್ತದ ಯೋಜನಾ ವರದಿಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆ ಕೋರಲಾಗಿದೆ. |
|---|---|---|---|---|
| 27 | ಹಾಸನ ನಗರದ ಚನ್ನಪಟ್ಟಣ ಕೆರೆಯ ಅಂಗಳದಲ್ಲಿ ವಿಹಾರಧಾಮದ ಅಭಿವೃದ್ಧಿ ಮತ್ತು ಉದ್ಯಾನವನ ನಿರ್ಮಾಣ ಕಾಮಗಾರಿ | ಜಸಂಇ 13 ಎನ್‌ಹೆಚ್‌ಪಿ 2019 ದಿನಾಂಕ: 28.02.2019 | 144.00 | ಪರಿಷ್ಕೃತ ಯೋಜನಾ ವರದಿಯನ್ನು ಮುಂಬರುವ ನಿಗಮದ ಮಂಡಳಿಯ ಸಭೆಯ ಮುಂದೆ ಮಂಡಿಸಲಾಗಿದೆ. |
| 28 | Lifing of water from Arkavathy river below Arkavathy Reservoir near Mallalli bridge to provide Micro Irrigation system to ghe lands of Doddalahalli, Uyyamballi, Hegganuru and yelagalli panchayath limits in Kanaka0pur Taluk (by utilising 225.28 MCA. Of water) ಯೋಜನೆ | ಜಸಂಇ 10 ಎಂಎಂಕೆ 2019 ದಿನಾಂಕ: 01.07.2019 | 70.00 | ಕಾಮಗಾರಿ ಪ್ರಗತಿಯಲ್ಲಿದೆ. |

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 9 ಪಿಎಂಎ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:12-03-2020.

108
U/2
12/03/2020

ಇಂದ:

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ :

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು-01.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಮಹೇಶ್ .ಎನ್ (ಕೊಳ್ಳೇಗಾಲ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:705 ಕ್ಕೆ ಉತ್ತರ ನೀಡುವ ಕುರಿತು.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ವಿಧಾನ ಪರಿಷತ್ ಸದಸ್ಯರಾದ ಶ್ರೀ ಮಹೇಶ್ .ಎನ್ (ಕೊಳ್ಳೇಗಾಲ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:705 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಎಂ. ಶರಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪ್ರಾಥಮಿಕ ಶಿಕ್ಷಣ) ಶಿಕ್ಷಣ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 705

ಸದಸ್ಯರ ಹೆಸರು : ಶ್ರೀ ಮಹೇಶ್ ಎನ್. (ಕೊಳ್ಳೇಗಾಲ)

ಉತ್ತರಿಸಬೇಕಾದ ದಿನಾಂಕ : 12-03-2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ವರ್ಗಾವಣೆಗೆ ರೂಪಿಸಲಾಗಿರುವ ನಿಯಮಗಳೇನು: (ವಿವರ ನೀಡುವುದು) | ಶಿಕ್ಷಕರ ವರ್ಗಾವಣೆಗೆ "ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು(ಶಿಕ್ಷಕರ ವರ್ಗಾವಣಾ ನಿಯಂತ್ರಣ) ಅಧಿನಿಯಮ, 2007" ಜಾರಿಯಲ್ಲಿದ್ದು, ಸದರಿ ಮೂಲ ಕಾಯ್ದೆಗೆ ಈಗಾಗಲೇ 2015 ರಲ್ಲಿ ಎರಡು ತಿದ್ದುಪಡಿಗಳು, 2017 ರಲ್ಲಿ ಒಂದು ತಿದ್ದುಪಡಿ ಮತ್ತು 2018-19 ರಲ್ಲಿ ಒಂದು ತಿದ್ದುಪಡಿ ಬಂದಿದೆ. ಸದರಿ ಕಾಯ್ದೆಗೆ ದಿನಾಂಕ :29-11-2017 ಹಾಗೂ 11-06-2019 ರಲ್ಲಿ ನಿಯಮಗಳು ಜಾರಿಯಾಗಿರುತ್ತವೆ.<br>(ಕಾಯ್ದೆ ಹಾಗೂ ನಿಯಮಗಳ ಪ್ರತಿಯನ್ನು ಲಗತ್ತಿಸಿದೆ). |
| ಆ. | ಕಡ್ಡಾಯ ವರ್ಗಾವಣೆಗೆ ನಿಗಧಿ ಮಾಡಿರುವ ಪ್ರಮಾಣ ಎಷ್ಟು; ಕಡ್ಡಾಯ ವರ್ಗಾವಣೆಯಿಂದಾಗಿ ವರ್ಗಾವಣೆ ಬಯಸಿಲ್ಲದ, ವರ್ಗಾವಣೆ ಅಗತ್ಯವಿಲ್ಲದ ಶಿಕ್ಷಕರೂ ಸಹ ವರ್ಗಾವಣೆಯಾಗಿ ಶಾಲಾ ನಿರ್ವಹಣೆಯಲ್ಲಿ ವ್ಯತ್ಯಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿಕ್ಷಕರ ವರ್ಗಾವಣೆ ಕಾಯ್ದೆ-2007ರ ನಿಯಮಗಳಂತೆ 2019ರಲ್ಲಿ ಹಮ್ಮಿಕೊಳ್ಳಲಾಗಿದ್ದ ಕಡ್ಡಾಯ ವರ್ಗಾವಣೆಗಳಲ್ಲಿ ಎ ವಲಯದ ಶಾಲೆಗಳಲ್ಲಿ 10 ವರ್ಷಗಳಿಗಿಂತ ಹೆಚ್ಚಿನ ಸೇವೆ ಸಲ್ಲಿಸಿದವರನ್ನು ಮಾತ್ರ ವಿನಾಯಿತಿ ವರ್ಗದ ಶಿಕ್ಷಕರನ್ನು ಹೊರತುಪಡಿಸಿ ಉಳಿದ ಶಿಕ್ಷಕರನ್ನು ಶೇಕಡ 4ರ ಮಿತಿಯೊಳಗೆ ಸ್ಥಳದ ಲಭ್ಯತೆಗೊಳಪಟ್ಟು ಕೌನ್ಸಿಲಿಂಗ ಮುಖಾಂತರದಲ್ಲಿ ಸ್ಥಳ ನಿಯುಕ್ತಿಗೊಳಿಸಲಾಗಿದೆ. 'ಎ' ವಲಯದಲ್ಲಿ ಕಾರ್ಯನಿರ್ವಹಿಸದ ಬೇರೆ ಶಿಕ್ಷಕರಿಗೂ ಸಹ ಅವಕಾಶ ಕಲ್ಪಿಸಲು ಕೋರಿಕೆ ಇಲ್ಲದಿದ್ದರೂ 'ಎ' ವಲಯದಿಂದ ಗರಿಷ್ಠ ಅವಧಿ ಸೇವೆ ಸಲ್ಲಿಸಿದವರನ್ನು ವರ್ಗಾಯಿಸಲಾಗಿದೆ. |

| | | |
|---|---|---|
| | | ಕಡ್ಡಾಯ ವರ್ಗಾವಣೆ ಕ್ರಮಗಳಿಂದ ಶಾಲಾ ನಿರ್ವಹಣೆಯಲ್ಲಿ ಯಾವುದೇ ವ್ಯತ್ಯಯವಾಗಿಲ್ಲ. ಬದಲಿಗೆ ಗ್ರಾಮಾಂತರ ಭಾಗದಲ್ಲಿ / ಸಿ ವಲಯದ ಶಾಲೆಗಳಲ್ಲಿ ಶಿಕ್ಷಕರನ್ನು ಲಭ್ಯಪಡಿಸಲು ಕಾಯ್ದೆಯ ಆಶಯದಂತೆ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ. |
| ಇ. | ಕಡ್ಡಾಯ ವರ್ಗಾವಣೆ ನಿಗಧಿ ಮಾಡಿರುವ ಶೇಕಡವಾರು ಪ್ರಮಾಣವನ್ನು ಮೀರಿ ವರ್ಗಾವಣೆ ಅನಿವಾರ್ಯ ಇರುವ ಶಿಕ್ಷಕರನ್ನು ವರ್ಗಾವಣೆಗೆ ಪರಿಗಣಿಸಲು ಅವಕಾಶವಿದೆಯೇ; | ಕಡ್ಡಾಯ ವರ್ಗಾವಣೆಗೊಳಪಡುವ ಶಿಕ್ಷಕರಲ್ಲಿ ವಿನಾಯಿತಿ ವರ್ಗದ ಶಿಕ್ಷಕರನ್ನು ಹೊರತುಪಡಿಸಿ ಉಳಿದ ಶಿಕ್ಷಕರನ್ನು ಶೇಕಡ 4ರ ಮಿತಿಯೊಳಗೆ ಮಾತ್ರ ಸಿ ವಲಯದ ಶಾಲೆಗಳಿಗೆ ಸ್ಥಳದ ಲಭ್ಯತೆಗೊಳಪಟ್ಟು ಸ್ಥಳನಿಯುಕ್ತಿಗೊಳಿಸಿದೆ.<br>ಕಡ್ಡಾಯ ವರ್ಗಾವಣೆ ನಿಗಧಿಮಾಡಿರುವ ಶೇಕಡ 4 ರಷ್ಟು ಪ್ರಮಾಣವನ್ನು ಮೀರಿ ವರ್ಗಾವಣೆ ಅನಿವಾರ್ಯ ಇರುವ ಶಿಕ್ಷಕರನ್ನು ವರ್ಗಾವಣೆಗೆ ಪರಿಗಣಿಸಲು ವರ್ಗಾವಣೆಯ ನಿಯಮಗಳಲ್ಲಿ ಅವಕಾಶವಿಲ್ಲ. |
| ಈ. | ಇಲ್ಲವಾದಲ್ಲಿ, ಅನಿವಾರ್ಯವಾಗಿರುವ ಶಿಕ್ಷಕರಿಗೆ ವರ್ಗಾವಣೆ ಸಿಗದೇ ಹೋದಲ್ಲಿ ತಮ್ಮ ಕುಟುಂಬದಿಂದ ದೂರ ಉಳಿಯುವುದರಿಂದ ಕಾರ್ಯಕ್ಷಮತೆ ಹಾಗೂ ಕಾರ್ಯದಕ್ಷತೆ ಕುಂಠಿತವಾಗುವುದಿಲ್ಲವೇ; | ಗ್ರಾಮೀಣ ಭಾಗದಲ್ಲಿ ಮತ್ತು ಸಿ ವಲಯದ ಶಾಲೆಗಳಲ್ಲಿ ಶಿಕ್ಷಕರನ್ನು ಲಭ್ಯಪಡಿಸಲು ಮತ್ತು ಸಿ ವಲಯದಲ್ಲಿ ನಿರಂತರ ಸೇವೆ ಮಾಡಿರುವ ಶಿಕ್ಷಕರಿಗೆ ಎ ವಲಯದ ಶಾಲೆಗಳಿಗೆ ವರ್ಗಾವಣೆಗೆ ಅವಕಾಶ ನೀಡಲು ಕಡ್ಡಾಯ ವರ್ಗಾವಣೆಗಳನ್ನು ನಿಯಮಾನುಸಾರ ಹಮ್ಮಿಕೊಂಡಿದೆ. ಶೈಕ್ಷಣಿಕ ಉದ್ದೇಶಕ್ಕಾಗಿ ಮತ್ತು ಎಲ್ಲಾ ಶಿಕ್ಷಕರಿಗೆ ಸಮಾನ ಅವಕಾಶಗಳನ್ನು ಕಲ್ಪಿಸುವ ಕಾರಣಕ್ಕಾಗಿ ಕಡ್ಡಾಯ ವರ್ಗಾವಣೆ ಕ್ರಮಗಳನ್ನು ನಿಯಮಾನುಸಾರ ಹಮ್ಮಿಕೊಳ್ಳಲಾಗಿದೆ. ವರ್ಗಾವಣೆ ಸರ್ಕಾರಿ ನೌಕರರಿಗೆ ಸಾಮಾನ್ಯ ಪ್ರಕ್ರಿಯೆಯಾಗಿದ್ದು, ಕಾರ್ಯನಿರ್ವಹಣೆಗೆ ಧಕ್ಕೆಯಾಗುವ ಸಂಭವವಿಲ್ಲ. |
| ಉ. | ಇಂತಹ ಪ್ರಕರಣಗಳನ್ನು ವಿಶೇಷ ಎಂದು ಪರಿಗಣಿಸಿ ವರ್ಗಾವಣೆ ಅನಿವಾರ್ಯವಿರುವ ಶಿಕ್ಷಕರನ್ನು ಹೆಚ್ಚುವರಿಯಾಗಿ ವರ್ಗಾವಣೆಗೆ | ಪ್ರಸ್ತುತ ಇರುವ ನಿಯಮಗಳಲ್ಲಿ ಅವಕಾಶವಿರುವುದಿಲ್ಲ |

| | | |
|---|---|---|
| | ಪರಿಗಣಿಸಲು ಸಾಧ್ಯವಿದೆಯೇ; ಇಂತಹ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | |
| ಊ. | ಕಡ್ಡಾಯ ವರ್ಗಾವಣೆ ಪ್ರಮಾಣವನ್ನೂ ಮೀರಿ ವರ್ಗಾವಣೆಯ ಅನಿವಾರ್ಯತೆ ಎದುರಿಸುತ್ತಿರುವ ಶಿಕ್ಷಕರಿಗಾಗಿ ಸರ್ಕಾರ ಯಾವ ಕ್ರಮಗಳನ್ನು ಕೈಗೊಳ್ಳಲಿದೆ; | ಕಡ್ಡಾಯ ವರ್ಗಾಣವೆಯ ಮಿತಿಯನ್ನು ಮೀರಿ ವರ್ಗಾವಣೆ ಮಾಡಿಲ್ಲವಾದ್ದರಿಂದ ಅಂತಹ ಪ್ರಶ್ನೆ ಉದ್ಭವಿಸುವುದಿಲ್ಲ. |
| ಋ. | ಪ್ರಾಥಮಿಕ ಶಾಲೆಗಳ ಹೆಚ್ಚುವರಿ ಶಿಕ್ಷಕರು ಎಂದು ಪರಿಗಣಿಸಿ ತಾಲ್ಲೂಕಿನಿಂದ ಹೊರಗೆ ವರ್ಗಾವಣೆ ಮಾಡಿರುವ ಶಿಕ್ಷಕರ ಸಂಖ್ಯೆ ಎಷ್ಟು; (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ನೀಡುವುದು) | ಹೆಚ್ಚುವರಿ ಕೌನ್ಸಿಲಿಂಗ್ ಪ್ರಕ್ರಿಯೆಯಲ್ಲಿ ಒಟ್ಟು 965 ಪ್ರಾಥಮಿಕ ಶಾಲಾ ಶಿಕ್ಷಕರು ತಾಲ್ಲೂಕಿನಿಂದ ಹೊರಗೆ ಸ್ಥಳ ನಿಯುಕ್ತಿ ಆಯ್ಕೆ ಮಾಡಿಕೊಂಡಿರುತ್ತಾರೆ. (ಜಿಲ್ಲಾವಾರು, ತಾಲ್ಲೂಕುವಾರು ಮಾಹಿತಿ ಅನುಬಂಧ-1ರಲ್ಲಿ ಲಗತ್ತಿಸಿದೆ) |
| ಎ. | ಕಡ್ಡಾಯ ವರ್ಗಾವಣೆಯಾದ ಹೆಚ್ಚುವರಿ ಶಿಕ್ಷಕರನ್ನು ಮರಳಿ ಆಯಾಯ ತಾಲ್ಲೂಕಿಗೆ ಸ್ಥಳ ನಿಯುಕ್ತಿ ಮಾಡಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? | ಯಾವುದೇ ಶಾಲೆಗೆ ವಿದ್ಯಾರ್ಥಿ:ಶಿಕ್ಷಕರ ಅನುಪಾತದಂತೆ ಶಿಕ್ಷಕರನ್ನು ನೀಡಬೇಕಾಗುತ್ತದೆ. ದಾಖಲಾತಿ ಸಂಖ್ಯೆಗೆ ಅಗತ್ಯತೆಯನ್ನು ಗಮನಿಸಿ ಹೆಚ್ಚುವರಿಯಾಗಿರುವ ಶಿಕ್ಷಕರನ್ನು "ಶಿಕ್ಷಕರ ಸಂಪನ್ಮೂಲ ಮರುಬಳಕೆ" ಕ್ರಮಗಳಡಿ ಅಗತ್ಯವಿರುವ ಶಾಲೆಗಳಿಗೆ ಕೌನ್ಸಿಲಿಂಗ್ ಮುಖಾಂತರ ನಿಗಧಿತ ಮಿತಿಯೊಳಗೆ ಸ್ಥಳ ನಿಯುಕ್ತಿಗೊಳಿಸಲಾಗುವುದು. ಪುನಃ ಮೂಲ ಶಾಲೆಗೆ ಸ್ಥಳ ನಿಯುಕ್ತಿಗೊಳಿಸುವುದು ಸಾಧುವಾಗಿರುವುದಿಲ್ಲ. |

ಇಪಿ 9 ಪಿಎಂಪಿ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

cFRNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| ಭಾಗ-IVA<br>Part-IVA | ಬೆಂಗಳೂರು, ಮಂಗಳವಾರ, ಜೂನ್ ೧೧, ೨೦೧೯ (ಜ್ಯೇಷ್ಠ ೨೧, ಶಕ ವರ್ಷ ೧೯೪೦)<br>**Bengaluru, Tuesday, June 11, 2019 (Jyesta 21, Shaka Varsha 1940)** | ನಂ. ೪೫೨<br>**No. 452** |
|---|---|---|

## EDUCATION SECRETARIAT

## NOTIFICATION

**No. ED 12 ETR 2018(1), Bengaluru, Dated 11th June 2019**

Whereas the draft of the Karnataka State Civil Services (Regulation of Transfer of Teachers) Rules, 2017 Which the Government of Karnataka Proposes to make in exercise of the powers conferred by section 13 of the Karnataka State Civil Services (Regulation of Transfer of Teachers) Act, 2007 (Karnataka Act 29 of 2007) is hereby published as required by sub-Section (1) of section 13 of the said Act for the information of all persons likely to be affected within fifteen days from the date of its publication in the Official Gazette.

And whereas the said Gazette was made available to public on 23.05.2019.

And whereas the objections and suggestions received from the public have been considered by the Government.

Now therefore, in exercise of the powers conferred by sub-section (1) of section 13 of the Karnataka State Civil Services (Regulation of Transfer of Teachers) Act 2007 (Karnataka Act.29 of 2007), the Government of Karnataka hereby makes the following rules further to amend the Karnataka State Civil Services (Regulation of Transfer of Teachers) Rules.2017 namely:-

## RULES

1) **Title & Commencement**: (1) These Rules shall be called the Karnataka State Civil Services (Regulation of Transfer of Teachers) (Amendment) Rules 2019.
   (2) They shall come in to force from the date of their final publication in the official Gazette.
2) **Amendment of Rule 7 :** In the Karnataka State Civil Services (Regulation of Transfer of Teachers) Rules, 2017 (hereinafter referred to as the said rules) in Rule 7, in Sub-Rule (1) after the words, "and persons with disability", the words "cases falling under clause (4) and (5) of sub-section (2) of section 6" shall be inserted.
3) **Amendment of Rule 10**: In the Rule 10, of the said rules in the table serial number 2, in Colum 3, for the words "is not applicable", the words "must have been completed". Shall be substituted.
4) **Amendment of Rule 29 :** In Rule 29, of the said rules, after Sub-rule (4) the following shall be inserted namely:-

(5) After completion of general transfers, where no teacher has opted for a place in the process of counseling and it is required to be filled based on student teacher ratio and in public interest, the State Government may transfer any teacher to such place who has completed minimum period of service in any other zone within the respective unit of seniority subject to the following conditions namely:-

i. Such transfer is only from taluks or districts having surplus teachers based on student teachers ratio and less than twenty percent of the posts are vacant;

ii. Such transfer shall be to a district/taluk/ School where more than twenty percent of vacancies exist;

iii. Such transfer shall fulfill the conditions under sub-rule (8) of rule 23;

iv. Such transfer shall be on the recommendation of the competent authority as prescribed in rule 3 through the Commissioner of public instructions/Director of pre-University Education as the case may be;

v. The competent authority shall publish the list of vacancies to which nobody has opted during the process of counseling and the be filled in accordance with student teacher ration under this rule immediately after completion of general transfer. The competent authority shall make transfer to such vacancies so notified after completion of General transfers in accordance with this rule and any violation shall be viewed and treated seriously.

vi. Competent authority in Districts having surplus of teachers have to publish the statistics of such surplus teachers subject wise but shall not publish the names of either the schools or the teachers;

vii. Students Achievement Tracking System (SATS) data and the Teacher Data System (TDS) data shall be utilised for assessing students and teacher strength and ratio between them and for other related statistical information prevailing in schools or Taluks or District; and

viii. Such teachers required to be transferred shall be the senior most teachers as per rule 13 from the list of surplus teachers prepared under rule 4 in that respective unit.

By order and in the name of the
Governor of Karnataka

**(M.Sharanabasappa)**
Under Secretary to Government(I/C)
Education Department(Primary)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಡಿ7) ಪ್ರತಿಗಳು: 300

ಶಿಕ್ಷಣ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಇಡಿ 12 ಇಟಿಆರ್ 2017 ಬೆಂಗಳೂರು, ದಿನಾಂಕ: 24.07.2018**

**ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 12 ಇಟಿಆರ್ 2017, ದಿನಾಂಕ: 29.11.2017ರ ಕನ್ನಡ ಅನುವಾದ ದಿನಾಂಕ: 24.07.2018**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರ (2007ರ ಕರ್ನಾಟಕ ಅಧಿನಿಯಮ 29) 13ನೇ ಪ್ರಕರಣದಲ್ಲಿ ಅಗತ್ಯಪಡಿಸಲಾದಂತೆ ಅಧಿಸೂಚನೆ ಸಂಖ್ಯೆ: ಇಡಿ 12 ಇಟಿಆರ್ 2017 ದಿನಾಂಕ: 07.09.2017ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು, 2017ರ ಕರಡನ್ನು ಕರ್ನಾಟಕ ರಾಜ್ಯ ಪತ್ರದ ಭಾಗ:IV.A ಸಂಖ್ಯೆ: 874, (ವಿಶೇಷ ರಾಜ್ಯಪತ್ರ) ದಿನಾಂಕ: 07.09.2017ರಲ್ಲಿ ಪ್ರಕಟಿಸಿ, ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಆಹ್ವಾನಿಸಿರುವುದರಿಂದ;

ಮತ್ತು ಸದರಿ ರಾಜ್ಯ ಪತ್ರವನ್ನು 07.09.2017ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ,

ಮತ್ತು ಸಾರ್ವಜನಿಕರಿಂದ ಸ್ವೀಕರಿಸಲಾದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ಸರ್ಕಾರವು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ಸರ್ಕಾರವು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರ (2007ರ ಕರ್ನಾಟಕ ಅಧಿನಿಯಮ 29) 13ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸಿರುತ್ತದೆ, ಎಂದರೆ:–

ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ(ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು, 2017 ಎಂದು ಕರೆಯತಕ್ಕದ್ದು.

(2) ಅವು, ರಾಜ್ಯ ಪತ್ರದಲ್ಲಿನ ಅಂತಿಮ ಪ್ರಕಟಣೆಯ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**–(1) ಈ ನಿಯಮಗಳಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,– (ಎ) 'ಅಧಿನಿಯಮ' ಎಂದರೆ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರ (2007ರ ಕರ್ನಾಟಕ ಅಧಿನಿಯಮ 29);

(ಬಿ) 'ನಿಯೋಜನೆ' ಎಂದರೆ, ಸರ್ಕಾರವು ನಿರ್ದಿಷ್ಟಪಡಿಸಿದ ಮಾನದಂಡಗಳಿಗೆ ಅನುಸಾರವಾಗಿ ಯಾವುದೇ ಶಾಲೆ ಅಥವಾ ಕಾಲೇಜುಗಳಿಗೆ ಹುದ್ದೆಗಳ ನಿಯೋಜನೆ;

(ಸಿ) 'ಪ್ರಕರಣ' ಎಂದರೆ ಅಧಿನಿಯಮದ ಪ್ರಕರಣ;

(ಡಿ) 'ಖಾಲಿಹುದ್ದೆ' ಎಂದರೆ ಸರ್ಕಾರವು ನಿರ್ದಿಷ್ಟಪಡಿಸಿದ ಮಾನದಂಡಗಳಿಗೆ ಅನುಸಾರವಾಗಿ ಖಾಲಿಯಾಗಿರುವ ಮತ್ತು ಅಗತ್ಯವಾಗಿರುವ ನಿರ್ದಿಷ್ಟ ಪ್ರವರ್ಗ ಅಥವಾ ಸಂದರ್ಭಾನುಸಾರವಾಗಿ ವಿಷಯದ ಶಿಕ್ಷಕರ ಹುದ್ದೆ.

(2) ಈ ನಿಯಮಗಳಲ್ಲಿ ಬಳಸಲಾದ ಆದರೆ ಪರಿಭಾಷಿಸದಿರುವ ಪದಗಳು ಹಾಗೂ ಪದಾವಳಿಗಳು, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2007ರಲ್ಲಿ (2007ರ ಕರ್ನಾಟಕ ಅಧಿನಿಯಮ 29) ಅವುಗಳಿಗೆ ನೀಡಲಾಗಿರುವ ಅರ್ಥವನ್ನೇ ಹೊಂದಿರತಕ್ಕದ್ದು.

**3. ಸಕ್ಷಮ ಪ್ರಾಧಿಕಾರ:**– ವಹಿಸಿಕೊಳ್ಳಲಾಗುವ ತತ್ಸಮಾನ ಹುದ್ದೆಗಳನ್ನೂ ಒಳಗೊಂಡಂತೆ ವರ್ಗಾವಣೆಗಾಗಿ ಸಕ್ಷಮ ಪ್ರಾಧಿಕಾರಗಳು, ಈ ಕೆಳಗಿನ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು, ಎಂದರೆ:–

ಕೋಷ್ಟಕ

| ಕ್ರಮ ಸಂಖ್ಯೆ | ಶಿಕ್ಷಕರ ಪ್ರವರ್ಗ | ಸಕ್ಷಮ ಪ್ರಧಿಕಾರ | |
|---|---|---|---|
| | | ಜೇಷ್ಠತಾ ಘಟಕದ ಒಳಗೆ ವರ್ಗಾವಣೆ | ಜೇಷ್ಠತಾ ಘಟಕದ ಹೊರಗೆ ವರ್ಗಾವಣೆ |
| (1) | (2) | (3) | (4) |
| 1 | ಮುಖ್ಯೋಪಾಧ್ಯಾಯರನ್ನೂ ಒಳಗೊಂಡು ಪ್ರಾಥಮಿಕ ಶಾಲಾ ಶಿಕ್ಷಕ | ಸಂಬಂಧಪಟ್ಟ ಶೈಕ್ಷಣಿಕ ಜಿಲ್ಲೆಯ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ (ಆಡಳಿತ) | I. ಅದೇ ವಿಭಾಗದೊಳಗಿನ ವರ್ಗಾವಣೆಗಾಗಿ:<br>(ಎ) ಬೆಂಗಳೂರು ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ, ಬೆಂಗಳೂರು;<br>(ಬಿ) ಮೈಸೂರು ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ, ಮೈಸೂರು.<br>(ಸಿ) ಬೆಳಗಾವಿ ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣದ ಅಪರ ಆಯುಕ್ತರ ಕಚೇರಿ, ಧಾರವಾಡ;<br>(ಡಿ) ಕಲಬುರ್ಗಿ ವಿಭಾಗ: ಜಂಟಿ ನಿರ್ದೇಶಕರು. ಸಾರ್ವಜನಿಕ ಶಿಕ್ಷಣದ ಅಪರ ಆಯುಕ್ತರವರ ಕಚೇರಿ, ಕಲಬುರ್ಗಿ. |

| (1) | (2) | (3) | (4) |
|---|---|---|---|
| | | | II. ವಿಭಾಗದ ಹೊರಗಿನ ವರ್ಗಾವಣೆಗಾಗಿ: ನಿರ್ದೇಶಕರು (ಪ್ರಾಥಮಿಕ ಶಿಕ್ಷಣ), ಬೆಂಗಳೂರು. |
| 2 | ಮಾಧ್ಯಮಿಕ ಶಾಲಾ ಶಿಕ್ಷಕ | (ಎ) ಬೆಂಗಳೂರು ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ, ಬೆಂಗಳೂರು;<br>(ಬಿ) ಮೈಸೂರು ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ, ಮೈಸೂರು;<br>(ಸಿ) ಬೆಳಗಾವಿ ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣದ ಅಪರ ಆಯುಕ್ತರವರ ಕಚೇರಿ, ಧಾರವಾಡ;<br>(ಡಿ) ಕಲಬುರಗಿ ವಿಭಾಗ: ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣದ ಅಪರ ಆಯುಕ್ತರವರ ಕಚೇರಿ, ಕಲಬುರಗಿ. | ನಿರ್ದೇಶಕರು, (ಮಾಧ್ಯಮಿಕ ಶಿಕ್ಷಣ), ಬೆಂಗಳೂರು. |
| 3 | ಮಾಧ್ಯಮಿಕ ಶಾಲಾ ಮುಖ್ಯೋಪಾಧ್ಯಾಯ ಮತ್ತು ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ ಮಾಧ್ಯಮಿಕ ಶಿಕ್ಷಣದ ಇತರ ಹುದ್ದೆಗಳು. | (ಎ) ಬೆಂಗಳೂರು ಹಾಗೂ ಮೈಸೂರು ವಿಭಾಗಗಳು: ನಿರ್ದೇಶಕರು, (ಮಾಧ್ಯಮಿಕ ಶಿಕ್ಷಣ), ಬೆಂಗಳೂರು;<br>(ಬಿ) ಬೆಳಗಾವಿ ವಿಭಾಗ: ನಿರ್ದೇಶಕರು, ಸಾರ್ವಜನಿಕ ಶಿಕ್ಷಣದ ಅಪರ ಆಯುಕ್ತರವರ ಕಚೇರಿ, ಧಾರವಾಡ;<br>(ಸಿ) ಕಲಬುರಗಿ ವಿಭಾಗ: ನಿರ್ದೇಶಕರು, ಸಾರ್ವಜನಿಕ ಶಿಕ್ಷಣದ ಅಪರ ಆಯುಕ್ತರವರ ಕಚೇರಿ, ಕಲಬುರಗಿ. | ನಿರ್ದೇಶಕರು, (ಮಾಧ್ಯಮಿಕ ಶಿಕ್ಷಣ), ಬೆಂಗಳೂರು. |
| 4 | ಪದವಿಪೂರ್ವ ಕಾಲೇಜಿನ ಉಪನ್ಯಾಸಕರು ಹಾಗೂ ಪ್ರಾಂಶುಪಾಲರು. | ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ. | ಸಂಬಂಧಪಡುವುದಿಲ್ಲ |

ಟಿಪ್ಪಣಿ:–

(1) ಸಾರ್ವಜನಿಕ ಶಿಕ್ಷಣ ಆಯುಕ್ತರು ಅಥವಾ ಸರ್ಕಾರವು ಅಧಿಸೂಚಿಸುವ ಯಾವೊಬ್ಬ ಅಧಿಕಾರಿಯು, ವಹಿಸಿಕೊಳ್ಳಲಾದ ತತ್ಸಮಾನ ಹುದ್ದೆಗಳನ್ನೂ ಒಳಗೊಂಡು ಮೇಲ್ಕಂಡ ಕೋಷ್ಟಕದ 1ರಿಂದ 3ರ ವರೆಗಿನ ಕ್ರಮ ಸಂಖ್ಯೆಯಲ್ಲಿರುವ ಶಿಕ್ಷಕರ ಪ್ರವರ್ಗಗಳ ವರ್ಗಾವಣೆಗಾಗಿ, ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯಾಗಿರತಕ್ಕದ್ದು.

ಟಿಪ್ಪಣಿ:–

(2) ಪದವಿಪೂರ್ವ ಶಿಕ್ಷಣದ ನಿರ್ದೇಶಕರು ಅಥವಾ ಸರ್ಕಾರವು ಅಧಿಸೂಚಿಸುವ ಯಾವೊಬ್ಬ ಇತರ ಅಧಿಕಾರಿಯು, ವಹಿಸಿಕೊಳ್ಳಲಾದ ತತ್ಸಮಾನ ಹುದ್ದೆಗಳು ಸೇರಿದಂತೆ ಮೇಲ್ಕಂಡ ಕೋಷ್ಟಕದ 4ನೇ ಕ್ರಮಸಂಖ್ಯೆಯಲ್ಲಿರುವ ಶಿಕ್ಷಕರ ವರ್ಗಾವಣೆಗಾಗಿ ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯಾಗಿರತಕ್ಕದ್ದು.

4. ಶಿಕ್ಷಕರ ನಿಯೋಜನೆಯ ಪುನರಾವಲೋಕನ ಮತ್ತು ಸುವ್ಯವಸ್ಥೆಗೊಳಿಸುವಿಕೆ.– (1) ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಗಳ ಶಿಫಾರಸ್ಸುಗಳ ಆಧಾರದ ಮೇಲೆ ವಿವಿಧ ಶಾಲೆಗಳು ಹಾಗೂ ಕಾಲೇಜುಗಳಿಗೆ ಶಿಕ್ಷಕರ ಹುದ್ದೆಯ ಗರಿಷ್ಠ ನಿಯೋಜನೆಯ ಮಾನದಂಡಗಳನ್ನು ಸರ್ಕಾರವು ಎರಡು ವರ್ಷಗಳಿಗೊಮ್ಮೆ ಪುನರಾವಲೋಕನ ಮಾಡತಕ್ಕದ್ದು ಹಾಗೂ ಅಧ್ಯತಾನುಸಾರವಾಗಿ ಏಪ್ರಿಲ್ ತಿಂಗಳನ್ನು ಮೀರದಂತೆ ಪರಿಷ್ಕೃತ ಮಾನದಂಡಗಳನ್ನು ಸರ್ಕಾರವು ನಿರ್ದಿಷ್ಟಪಡಿಸತಕ್ಕದ್ದು.

(2) ವರ್ಗಾವಣೆಯ ಮಾನದಂಡಗಳು, ಶಿಕ್ಷಣ ಕಿರಣದಲ್ಲಿ (ವಿದ್ಯಾರ್ಥಿಗಳ ಸಾಧನೆಯನ್ನು ಗುರುತಿಸುವ ವ್ಯವಸ್ಥೆ) ದಾಖಲಾದಂತೆ ಹಿಂದಿನ ಶೈಕ್ಷಣಿಕ ವರ್ಷದ ಅವಧಿಯಲ್ಲಿ ಪ್ರತಿಯೊಂದು ಶಾಲೆ ಅಥವಾ ಕಾಲೇಜಿನಲ್ಲಿರುವ ವಿದ್ಯಾರ್ಥಿಗಳ ಸಂಖ್ಯೆಗೆ ಸಂಬಂಧಪಟ್ಟಂತೆ ಶಿಕ್ಷಕರ ಹುದ್ದೆಯ ಅವಶ್ಯಕತೆ, ಶಿಕ್ಷಕರುಗಳ ಮಂಜೂರಾತಿ ಸಂಖ್ಯೆ, ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರುಗಳ ಸಂಖ್ಯೆ, ದೈಹಿಕ ಶಿಕ್ಷಣ, ಸಂಗೀತ, ಕರಕುಶಲ, ಔದ್ಯೋಗಿಕ ಶಿಕ್ಷಣ ಇತ್ಯಾದಿಗಳನ್ನೂ ಒಳಗೊಂಡು ವಿಷಯವಾರು ಶಿಕ್ಷಕರುಗಳ ಲಭ್ಯತೆ, ಶಿಕ್ಷಕರುಗಳ ವಿವಿಧ ಪ್ರವರ್ಗಗಳಿಗಾಗಿ ನಿರ್ದಿಷ್ಟಪಡಿಸಲಾದ ಕೆಲಸದ ಪ್ರಮಾಣ ಮತ್ತು

ಉಚಿತ ಹಾಗೂ ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು ಅಧಿನಿಯಮ, 2009ರ (2009ರ ಕೇಂದ್ರ ಅಧಿನಿಯಮ ಸಂಖ್ಯೆ 35) ಉಪಬಂಧಗಳನ್ನು ಒಳಗೊಂಡಿರತಕ್ಕದ್ದು.

(3) ಸರ್ಕಾರವು ನಿರ್ದಿಷ್ಟಪಡಿಸಿರುವ ಮಾನದಂಡಗಳ ಆಧಾರದ ಮೇಲೆ, ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯು, ಅನುಕ್ರಮವಾಗಿ ಎರಡು ವರ್ಷಗಳಿಗೊಮ್ಮೆ ಶಾಲೆಗಳಿಗೆ ಹಾಗೂ ಕಾಲೇಜುಗಳಿಗೆ ಮಂಜೂರಾದ ಹುದ್ದೆಗಳನ್ನು ಮರು ನಿಯೋಜನೆ ಮಾಡತಕ್ಕದ್ದು.

(4) ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯು, ರಾಜ್ಯಮಟ್ಟದಲ್ಲಿ ಅಗತ್ಯವಿರುವ ಶಿಕ್ಷಕರ ಹಾಗೂ ಉಪನ್ಯಾಸಕರ ವಿವಿಧ ಪ್ರವರ್ಗಗಳ ಒಟ್ಟು ಸಂಖ್ಯೆಯನ್ನು ಸಮಗ್ರವಾಗಿ ಪರಿಷ್ಕರಿಸಿರುವ ಸಂಬಂಧ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು.

(5) ಮಂಜೂರಾದ ಹುದ್ದೆಗಳ ಮರುನಿಯುಕ್ತಿ ಹಾಗೂ ಶಿಕ್ಷಕರ ಹಾಲಿ ನಿಯುಕ್ತಿಯ ಆಧಾರದ ಮೇಲೆ, ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯು, ಹೆಚ್ಚುವರಿ ಶಿಕ್ಷಕರನ್ನು ಗುರುತಿಸತಕ್ಕದ್ದು ಹಾಗೂ ಶಿಕ್ಷಕರುಗಳ ಕೊರತೆ ಇರುವ ಶಾಲೆಗಳು ಮತ್ತು ಕಾಲೇಜುಗಳನ್ನು ಗುರುತಿಸತಕ್ಕದ್ದು.

(6) (5)ನೇ ಉಪನಿಯಮದಲ್ಲಿ ಗುರುತಿಸಲಾದ ಶಿಕ್ಷಕರ ಕೊರತೆಯಿರುವ ಶಾಲೆಗಳು ಹಾಗೂ ಕಾಲೇಜುಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಸರ್ಕಾರವು, ಅಧಿನಿಯಮದ 5ನೇ ಪ್ರಕರಣದ (1)ನೇ ಉಪ ಪ್ರಕರಣದ ಅನುಸಾರವಾಗಿ ಭರ್ತಿ ಮಾಡತಕ್ಕದ್ದು.

(7) (5)ನೇ ಉಪನಿಯಮದಲ್ಲಿ ಗುರುತಿಸಿದವುಗಳನ್ನೂ ಒಳಗೊಂಡು ಶಿಕ್ಷಕರ ಕೊರತೆಯಿರುವ ಖಾಲಿ ಹುದ್ದೆಗಳಿಗೆ ಅಥವಾ ಶಾಲೆಗಳಿಗೆ ಅಥವಾ ಕಾಲೇಜುಗಳಿಗೆ ಹೆಚ್ಚುವರಿ ಶಿಕ್ಷಕರುಗಳ ಮರುನಿಯೋಜನೆ ಮತ್ತು ವರ್ಗಾವಣೆಯು, ಇತರ ಬಗೆಯ ವರ್ಗಾವಣೆಗಳನ್ನು ಕೈಗೊಳ್ಳುವ ಮೊದಲು ಎರಡು ವರ್ಷಗಳಿಗೊಮ್ಮೆ ಮಾಡಬೇಕಾದ ಪ್ರಥಮ ಚಟುವಟಿಕೆಯಾಗಿರತಕ್ಕದ್ದು.

(8) (7)ನೇ ಉಪನಿಯಮದ ಅನುಸಾರ ವರ್ಗಾವಣೆಯಾಗಿರುವ ಹೆಚ್ಚುವರಿ ಶಿಕ್ಷಕರುಗಳು, ವರ್ಗಾವಣೆಯ ಆದ್ಯತಾ ಪಟ್ಟಿಯ ಸಂಬಂಧದಲ್ಲಿ ಅವರ ಜೇಷ್ಠತೆಯ ಆಧಾರದ ಮೇಲೆ, ಅದೇ ವರ್ಷದ ಅವಧಿಯಲ್ಲಿ ವರ್ಗಾವಣೆಯ ಇತರ ಬಗೆಯ ಕೌನ್ಸಿಲಿಂಗ್ ಪ್ರಕ್ರಿಯೆಯಲ್ಲಿ ಭಾಗವಹಿಸಲು ಆಯ್ಕೆಯನ್ನು ಹೊಂದಿರತಕ್ಕದ್ದು.

**5. ವಿವಿಧ ಬಗೆಯ ವರ್ಗಾವಣೆಗಳ ಮೇಲೆ ಪರಿಮಿತಿಗಳು.–** (1) ಅಧಿನಿಯಮದ 3ಬಿ ಪ್ರಕರಣದ ಅನುಸಾರ ವರ್ಗಾವಣೆಯ ಅಥವಾ ಜೇಷ್ಠತಾ ಘಟಕದ ಹೊರಗಿನ ವರ್ಗಾವಣೆಯ ಕೋರಿಕೆಯನ್ನು, ಶಿಕ್ಷಕನು ಹಾಲಿ ನಿಯುಕ್ತಿಯ ತಾಲ್ಲೂಕಿನಲ್ಲಿರುವ ಸಂಬಂಧಪಟ್ಟ ಪ್ರವರ್ಗದ ಒಟ್ಟು ಖಾಲಿ ಸ್ಥಾನಗಳು, ಅವನು ಹಾಲಿ ನಿಯೋಜನೆಯಲ್ಲಿರುವ ತಾಲ್ಲೂಕಿನ ಸಂಬಂಧಪಟ್ಟ ಪ್ರವರ್ಗದ ಹುದ್ದೆಯ ಒಟ್ಟು ಮಂಜೂರಾದ ಸಂಖ್ಯೆಯ ಶೇಕಡಾ ಇಪ್ಪತ್ತರಷ್ಟನ್ನು ಮೀರದಿರುವಲ್ಲಿ ಅನುಮತಿಸತಕ್ಕದ್ದು.

(2) ಅಧಿನಿಯಮದ 4ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಒಟ್ಟಾರೆ ಶೇಕಡಾ ಹದಿನೈದರ ಪರಿಮಿತಿಯ ಪೈಕಿ ಕೆಳಗಿನ ಕೋಷ್ಟಕದಲ್ಲಿ ವಿವರಿಸಿದಂಥ ಉಪ–ಪರಿಮಿತಿಗಳು ವಿವಿಧ ಬಗೆಯ ವರ್ಗಾವಣೆಗಳಿಗೆ ಅನ್ವಯವಾಗತಕ್ಕದ್ದು.

ಕೋಷ್ಟಕ

| ಕ್ರಮ ಸಂಖ್ಯೆ | ವರ್ಗಾವಣೆಯ ಬಗೆ | ಉಪ–ಪರಿಮಿತಿ (ಜೇಷ್ಠತಾ ಘಟಕದ ಸಂಬಂಧದಲ್ಲಿ ಸಂಬಂಧಪಟ್ಟ ಶಿಕ್ಷಕರ ಪ್ರವರ್ಗದ ಮಂಜೂರಾತಿ ಸಂಖ್ಯೆಯ ಶೇಕಡಾವಾರು) |
|---|---|---|
| 1 | 4ನೇ ನಿಯಮದ ಅನುಸಾರ ಹೆಚ್ಚುವರಿ ಶಿಕ್ಷಕರುಗಳ ವರ್ಗಾವಣೆ | ಶೇಕಡಾ ಐದು |
| 2 | ಅಧಿನಿಯಮದ 3ಎ ಪ್ರಕರಣದ (3)ನೇ ಉಪ–ಪ್ರಕರಣ ಹಾಗೂ 3ಬಿ ಪ್ರಕರಣದ ಅನುಸಾರ ಐಚ್ಛಿಕ ವರ್ಗಾವಣೆಗಳು | ಶೇಕಡಾ ಐದು |
| 3 | ಅಧಿನಿಯಮದ 3ಎ ಪ್ರಕರಣದ (1) ಮತ್ತು (2)ನೇ ಉಪ–ಪ್ರಕರಣಗಳ ಅನುಸಾರವಾಗಿ ಕಡ್ಡಾಯ ವರ್ಗಾವಣೆಗಳು | ಶೇಕಡಾ ಐದು |
| 4 | ಜೇಷ್ಠತಾ ಘಟಕದ ಹೊರಗಿನ ವರ್ಗಾವಣೆಗಳು | ಶೇಕಡಾ ಮೂರು |
| 5 | ದೂರುಗಳ ಆಧಾರದ ಮೇಲಿನ ವರ್ಗಾವಣೆಗಳು | ಯಾವುದೇ ಪರಿಮಿತಿಯಿಲ್ಲದಿರುವುದು |

ಪರಂತು, ಮೇಲ್ಕಂಡ ಕೋಷ್ಟಕದಲ್ಲಿರುವ 2, 3 ಮತ್ತು 4ನೇ ಕ್ರಮ ಸಂಖ್ಯೆಯಲ್ಲಿ ನಮೂದಿಸಿರುವ ವರ್ಗಾವಣೆಯ ಬಗೆಗಳಿಗಾಗಿನ ಉಪ–ಪರಿಮಿತಿಯು, 4ನೇ ನಿಯಮದ ಅನುಸಾರವಾಗಿ ಹೆಚ್ಚುವರಿ ಶಿಕ್ಷಕರುಗಳ ವರ್ಗಾವಣೆಯನ್ನು ಕೈಗೊಳ್ಳುವಾಗ, [illegible] ವರ್ಷಗಳಲ್ಲಿ ಅನುಕ್ರಮವಾಗಿ ಶೇಕಡಾ ನಾಲ್ಕು, ಶೇಕಡಾ ನಾಲ್ಕು ಮತ್ತು ಶೇಕಡಾ ಎರಡರಷ್ಟಿರತಕ್ಕದ್ದು:

ಮತ್ತು ಪರಂತು, ಜೇಷ್ಠತಾ ಘಟಕದ ಒಳಗಿನ ಹಾಗೂ ಹೊರಗಿನ ಪರಸ್ಪರ ವರ್ಗಾವಣೆಗಳು ಉಪ–ಪರಿಮಿತಿಯ ಉದ್ದೇಶಕ್ಕಾಗಿ ಗಣನೆಗೆ ತೆಗೆದುಕೊಳ್ಳತಕ್ಕದ್ದಲ್ಲ.

**6. ವರ್ಗಾವಣೆಗಾಗಿ ವೇಳಾಪಟ್ಟಿಯ ಸಿದ್ಧತೆ.–** (1) ಸಾಮಾನ್ಯವಾಗಿ ವರ್ಗಾವಣೆಗಳನ್ನು ಪ್ರತಿ ವರ್ಷ ಏಪ್ರಿಲ್ ಹಾಗೂ ಮೇ ತಿಂಗಳುಗಳಲ್ಲಿ ಕೈಗೊಳ್ಳತಕ್ಕದ್ದು.

(2) ಸರ್ಕಾರವು, ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯ ಶಿಫಾರಸ್ಸುಗಳ ಆಧಾರದ ಮೇಲೆ ಹಾಗೂ ಕಾರಣಗಳನ್ನು ದಾಖಲಿಸುವುದರ ಮೂಲಕ ಮೇಲ್ಕಂಡ (1)ನೇ ಉಪ–ನಿಯಮದಲ್ಲಿ ನಿರ್ದಿಷ್ಟಪಡಿಸಲಾದ ಕಾಲಮಿತಿಯ ನಂತರವೂ ಕೈಗೊಳ್ಳಬಹುದಾದ ವರ್ಗಾವಣೆಗಳಿಗೆ ಅನುಮತಿಯನ್ನು ನೀಡಬಹುದು

(3) ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯು, ಈ ಮುಂದಿನ ಕ್ರಮದಲ್ಲಿ ಕೈಗೊಳ್ಳಬಹುದಾದ ವಿವಿಧ ಬಗೆಯ ವರ್ಗಾವಣೆಗಳಿಗಾಗಿ ವೇಳಾ ಪಟ್ಟಿಯನ್ನು ಪ್ರಕಟಿಸತಕ್ಕದ್ದು.–

(i) 4ನೇ ನಿಯಮದ ಅನುಸಾರ ಹೆಚ್ಚುವರಿ ಶಿಕ್ಷಕರುಗಳ ವರ್ಗಾವಣೆ;

(ii) 21ನೇ ನಿಯಮದ (3)ನೇ ಉಪ-ನಿಯಮದ ಅನುಸಾರವಾಗಿ ಮಂಜೂರಾತಿ ಸಂಖ್ಯೆಯ ಶೇಕಡಾ 20ಕ್ಕಿಂತ ಹೆಚ್ಚಿನ ಖಾಲಿ ಹುದ್ದೆಗಳಿರುವ ತಾಲ್ಲೂಕುಗಳಿಗೆ ಕಡ್ಡಾಯವಾಗಿ ವರ್ಗಾವಣೆಗಳು;

(iii) ಅಧಿನಿಯಮದ 3ಎ ಪ್ರಕರಣದ (3)ನೇ ಉಪಪ್ರಕರಣ ಹಾಗೂ 3ಬಿ ಪ್ರಕರಣದ ಅನುಸಾರ ಐಚ್ಛಿಕ ವರ್ಗಾವಣೆ,-

(ಎ) 'ಎ' ವಲಯದಿಂದ 'ಬಿ' ವಲಯಕ್ಕೆ ವರ್ಗಾವಣೆ;

(ಬಿ) ಖಾಲಿ ಹುದ್ದೆಗಳು ಲಭ್ಯವಿರುವ ಸಂದರ್ಭದಲ್ಲಿ 'ಸಿ' ವಲಯದಿಂದ 'ಎ' ವಲಯಕ್ಕೆ ವರ್ಗಾವಣೆ;

(ಸಿ) 'ಸಿ' ವಲಯದಿಂದ 'ಬಿ' ವಲಯಕ್ಕೆ ವರ್ಗಾವಣೆ;

(iv) 21ನೇ ನಿಯಮದ (4)ನೇ ಉಪ-ನಿಯಮದ ಅನುಸಾರವಾಗಿ ಕಡ್ಡಾಯ ವರ್ಗಾವಣೆಗಳು;

(v) ಅಧಿನಿಯಮದ 3ಎ ಪ್ರಕರಣದ (1) ಮತ್ತು (2)ನೇ ಉಪ-ಪ್ರಕರಣಗಳ ಅನುಸಾರವಾಗಿ ಕಡ್ಡಾಯ ವರ್ಗಾವಣೆಗಳು:

(ಎ) ಖಾಲಿ ಹುದ್ದೆಗಳು ಲಭ್ಯವಿರುವ ಸಂದರ್ಭದಲ್ಲಿ 'ಎ' ವಲಯದಿಂದ 'ಬಿ' ವಲಯಕ್ಕೆ;

(ಬಿ) 'ಎ' ವಲಯದಿಂದ 'ಸಿ' ವಲಯಕ್ಕೆ;

(vi) ಅಪರಾಧಿಕ ವ್ಯವಹರಣೆಗಳು ಅಥವಾ ಶಿಸ್ತು ಕ್ರಮದ ವ್ಯವಹರಣೆಗಳನ್ನು ಎದುರಿಸುತ್ತಿರುವ ಶಿಕ್ಷಕರುಗಳು ಸಂದರ್ಭದಲ್ಲಿನ ವರ್ಗಾವಣೆಗಳು;

(vii) ಜೇಷ್ಠತಾ ಘಟಕದ ಒಳಗಿನ ಪರಸ್ಪರ ವರ್ಗಾವಣೆಗಳು;

(viii) ಜೇಷ್ಠತಾ ಘಟಕದ ಹೊರಗಿನ ವರ್ಗಾವಣೆಗಳು; ಮತ್ತು

(ix) ಜೇಷ್ಠತಾ ಘಟಕದ ಹೊರಗಿನ ಪರಸ್ಪರ ವರ್ಗಾವಣೆಗಳು.

(4) ಮಂಜೂರಾತಿ ವೃಂದದ ಸಂಖ್ಯೆಯ ಶೇಕಡಾ ಇಪ್ಪತ್ತಕಿಂತ ಹೆಚ್ಚಿನ ಶಿಕ್ಷಕರ ಯಾವುದೇ ನಿರ್ದಿಷ್ಟ ಪ್ರವರ್ಗದ ಹುದ್ದೆಗಳು ಖಾಲಿ ಇರುವಲ್ಲಿ ಆ ತಾಲ್ಲೂಕಿನಿಂದ ಜೇಷ್ಠತಾ ಘಟಕದ ಹೊರಗಡೆ ಕಡ್ಡಾಯ ಅಥವಾ ಕೋರಿಕೆಯ ವರ್ಗಾವಣೆಯನ್ನು ಅನುಮತಿಸತಕ್ಕದ್ದಲ್ಲ.

(5) ಈ ಚಟುವಟಿಕೆಗಳನ್ನು ಪೂರ್ಣಗೊಳಿಸಲು ಅಗತ್ಯಪಡಿಸಲಾದ ಪ್ರಕ್ರಿಯಾ ಚಟುವಟಿಕೆಗಳನ್ನು ಹಾಗೂ ಕಾಲವಿಕಿಯನ್ನು, ವೇಳಾ ಪಟ್ಟಿಯಲ್ಲಿ ನಿರ್ದಿಷ್ಟಪಡಿಸತಕ್ಕದ್ದು.

**7. ಅಧಿನಿಯಮದ 3ಎ ಪ್ರಕರಣದ ಅನುಸಾರ ಕಡ್ಡಾಯ ವರ್ಗಾವಣೆಯಿಂದ ಉಂಟಾಗುವ ಭಾವಿತ ಖಾಲಿ ಹುದ್ದೆಗಳನ್ನು ಗುರುತಿಸುವುದು.-** (1) ಜೇಷ್ಠತಾ ಘಟಕದ ಒಳಗಿನ ವರ್ಗಾವಣೆ ಜವಾಬ್ದಾರಿಯನ್ನು ಹೊಂದಿರುವ ಪ್ರತಿಯೊಂದು ಸಕ್ಷಮ ಪ್ರಾಧಿಕಾರವು, ಮನ್ನಣೆ ಪಡೆದ ಶಿಕ್ಷಕರ ಅಥವಾ ನೌಕರರ ಸಂಘದ ಪದಾಧಿಕಾರಿಗಳು, ಅವಿವಾಹಿತ ಮಹಿಳಾ ಶಿಕ್ಷಕರುಗಳು ಮತ್ತು ವಿಧವೆಯಾದ ಮಹಿಳಾ ಶಿಕ್ಷಕರುಗಳ ಹಾಗೂ ವಿಕಲಚೇತನ ವ್ಯಕ್ತಿಗಳನ್ನು ಹೊರತುಪಡಿಸಿ 'ಎ' ವಲಯದಲ್ಲಿ ಗರಿಷ್ಠ ಸೇವಾವಧಿಯನ್ನು ಪೂರ್ಣಗೊಳಿಸಿರುವ ಶಿಕ್ಷಕರುಗಳ ಪ್ರವರ್ಗವಾರು ಕರಡು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(2) ಪ್ರತಿಯೊಂದು ಸಕ್ಷಮ ಪ್ರಾಧಿಕಾರವು, 'ಎ' ವಲಯದಲ್ಲಿನ ಸೇವಾವಧಿಯನ್ನು ಗಣನೆಗೆ ತೆಗೆದುಕೊಳ್ಳದೆ, ಶಿಸ್ತುಕ್ರಮದ ವ್ಯವಹರಣೆ ಅಥವಾ ಅಪರಾಧಿಕ ವ್ಯವಹರಣೆಯನ್ನು ಎದುರಿಸುತ್ತಿರುವ ಹಾಗೂ ದಂಡನೆಯನ್ನು ವಿಧಿಸಿರುವ ಶಿಕ್ಷಕರುಗಳ ಕರಡು ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಹಾಗೂ ಪ್ರಕಟಗೊಳಿಸತಕ್ಕದ್ದು.

(3) ಐದು ದಿನಗಳ ಒಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಿ, ಸಕ್ಷಮ ಪ್ರಾಧಿಕಾರದ ಸೂಚನಾ ಫಲಕದ ಮೇಲೆ ಹಾಗೂ ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಕರಡು ಪಟ್ಟಿಗಳನ್ನು ಪ್ರಕಟಿಸತಕ್ಕದ್ದು.

(4) ಸ್ವೀಕರಿಸಲಾದ ಆಕ್ಷೇಪಣೆಗಳು, ಯಾವುದಾದರೂ ಇದ್ದರೆ, ಪರಿಗಣಿಸಿದ ತರುವಾಯ, 'ಸಿ' ವಲಯಕ್ಕೆ ಕಡ್ಡಾಯ ವರ್ಗಾವಣೆಗಾಗಿ ಶಿಕ್ಷಕರುಗಳ ಅಂತಿಮ ಪಟ್ಟಿಗಳು ಮತ್ತು 5ನೇ ನಿಯಮದ ಅಡಿಯಲ್ಲಿ ಕೋಷ್ಟಕದ 3ನೇ ಕ್ರಮ ಸಂಖ್ಯೆಯಲ್ಲಿ ಭಾವಿತ ಉಪ-ಪರಿಮಿತಿ ಇದ್ದರೆ, ಅದನ್ನು ಸಕ್ಷಮ ಪ್ರಾಧಿಕಾರದ ಸೂಚನಾ ಫಲಕದ ಮೇಲೆ ಮತ್ತು ಶಿಕ್ಷಕರ ವರ್ಗಾವಣಾ ಪೋರ್ಟಲ್‌ನಲ್ಲಿ ಪ್ರಕಟಿಸತಕ್ಕದ್ದು.

(5) (5)ನೇ ಉಪನಿಯಮದ ಅನುಸಾರ ಪಟ್ಟಿಗಳನ್ನು, ಎ-ವಲಯದಲ್ಲಿ ನಿರ್ವಹಿಸಿರುವ ಸೇವಾವಧಿಯ ಅವರೋಹಣ ಕ್ರಮದಲ್ಲಿ ಜೋಡಿಸತಕ್ಕದ್ದು.

(6) ಅಂಥ ಪ್ರತಿಯೊಂದು ಪಟ್ಟಿಯಲ್ಲಿ ಶಿಕ್ಷಕರು ಹೊಂದಿರುವ ಹುದ್ದೆಗಳನ್ನು ಅಧಿನಿಯಮದ 3ಎ ಪ್ರಕರಣದ (3)ನೇ ಉಪ-ಪ್ರಕರಣ ಮತ್ತು 3ಬಿ ಪ್ರಕರಣದ ಅಡಿಯಲ್ಲಿ ಐಚ್ಛಿಕ ವರ್ಗಾವಣೆಗಳ ಉದ್ದೇಶಕ್ಕಾಗಿ ಭಾವಿತ ಖಾಲಿ ಹುದ್ದೆಗಳೆಂದು ಪರಿಗಣಿಸತಕ್ಕದ್ದು:

ಪರಂತು, ಮೇಲಿನ 4ನೇ ನಿಯಮದ (5)ನೇ ಉಪ-ನಿಯಮದ ಪ್ರಕಾರ ಈಗಾಗಲೇ ಹೆಚ್ಚುವರಿ ಶಿಕ್ಷಕರೆಂದು ಗುರುತಿಸಲಾಗಿರುವ ಸಂಬಂಧಪಟ್ಟ ಶಿಕ್ಷಕರ ಸಂದರ್ಭದಲ್ಲಿ ಆ ಹುದ್ದೆಯನ್ನು ಭಾವಿತ ಖಾಲಿ ಹುದ್ದೆ ಎಂದು ಪರಿಗಣಿಸತಕ್ಕದ್ದಲ್ಲ.

**8. ಖಾಲಿ ಹುದ್ದೆಗಳ ಪಟ್ಟಿಯ ಪ್ರಕಟಣೆ.-** (1) ಮೇಲಿನ 7ನೇ ನಿಯಮದ (6)ನೇ ಉಪ-ನಿಯಮದ ಅನುಸಾರ ಗುರುತಿಸಲಾದ ಭಾವಿತ ಖಾಲಿ ಹುದ್ದೆಗಳನ್ನೂ ಒಳಗೊಂಡು ಪ್ರವರ್ಗವಾರು ಖಾಲಿ ಹುದ್ದೆಗಳ ಕರಡು ಪಟ್ಟಿಗಳನ್ನು ಐದು ದಿನಗಳೊಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಿ, ಸಕ್ಷಮ ಪ್ರಾಧಿಕಾರದ ಸೂಚನಾ ಫಲಕದ ಮೇಲೆ ಮತ್ತು ಶಿಕ್ಷಕರ ವರ್ಗಾವಣೆಯ ಪೋರ್ಟಲ್‌ನಲ್ಲಿ ಪ್ರಕಟಿಸತಕ್ಕದ್ದು.

(2) ಸ್ವೀಕರಿಸಿದ ಆಕ್ಷೇಪಣೆಗಳು ಏನಾದರೂ ಇದ್ದರೆ, ಅವುಗಳನ್ನು ಪರಿಗಣಿಸಿದ ತರುವಾಯ, ಅಂತಿಮ ಪಟ್ಟಿಗಳನ್ನು ಸಕ್ಷಮ ಪ್ರಾಧಿಕಾರದ ಸೂಚನಾ ಫಲಕದ ಮೇಲೆ ಮತ್ತು ಶಿಕ್ಷಕರ ವರ್ಗಾವಣೆಯ ಪೋರ್ಟಲ್‌ನಲ್ಲಿ ಪ್ರಕಟಿಸತಕ್ಕದ್ದು.

**9. ಐಚ್ಛಿಕ ವರ್ಗಾವಣೆಗಳಿಗಾಗಿ ಅರ್ಜಿ.-** (1) ತನ್ನ ಜೇಷ್ಠತಾ ಘಟಕದ ಒಳಗೆ ಅಥವಾ ಹೊರಗೆ ವರ್ಗಾವಣೆಯನ್ನು ಬಯಸುವ ಶಿಕ್ಷಕನು ವರ್ಗಾವಣೆ ಪ್ರಕ್ರಿಯೆ ನಿಯಂತ್ರಣಾ ಅಧಿಕಾರಿಯು ನಿರ್ದಿಷ್ಟಪಡಿಸಿದ ರೀತಿಯಲ್ಲಿ ಶಿಕ್ಷಕರ ವರ್ಗಾವಣೆಯ ಪೋರ್ಟಲ್‌ನಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) ಪೋರ್ಟಲ್‌ನಲ್ಲಿ ಅರ್ಜಿಯನ್ನು ಭರ್ತಿಮಾಡಿ ಅದರ ಮುದ್ರಿತ ಪ್ರತಿಯನ್ನು ಪಡೆದು ಶಿಕ್ಷಕರು ಸಹಿ ಮಾಡಿ ಅದರ ಪ್ರತಿಯನ್ನು ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

(3) ಸಹಿ ಮಾಡಿದ ಅರ್ಜಿಯನ್ನು, ಪ್ರಾಥಮಿಕ ಶಾಲೆ ಅಥವಾ ಮಾಧ್ಯಮಿಕ ಶಾಲಾ ಶಿಕ್ಷಕ ಅಥವಾ ಮುಖ್ಯೋಪಾಧ್ಯಾಯರನ್ನೂ ಒಳಗೊಂಡು ನಿರ್ದಿಷ್ಟಪಡಿಸಿದ ಸಮಾನ ಹುದ್ದೆಗಳಲ್ಲಿ ಕೆಲಸ ಮಾಡುವವರ ಸಂದರ್ಭದಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯ ಮೂಲಕ ಮತ್ತು ಪದವಿ–ಪೂರ್ವ ಉಪನ್ಯಾಸಕರು ಅಥವಾ ಪ್ರಾಂಶುಪಾಲರ ಸಂದರ್ಭದಲ್ಲಿ ಸಂಬಂಧಪಟ್ಟ ಪದವಿ–ಪೂರ್ವ ಶಿಕ್ಷಣ ಇಲಾಖೆಯ ಉಪ–ನಿರ್ದೇಶಕರ ಮೂಲಕ ಸಲ್ಲಿಸತಕ್ಕದ್ದು.

(4) ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿ ಅಥವಾ ಸಂದರ್ಭಾನುಸಾರವಾಗಿ ಪದವಿ–ಪೂರ್ವ ಶಿಕ್ಷಣ ಇಲಾಖೆಯ ಉಪ–ನಿರ್ದೇಶಕರು, ಶಿಕ್ಷಕರ ವರ್ಗಾವಣಾ ಪೋರ್ಟಲ್‌ನಲ್ಲಿ ಅಗತ್ಯಪಡಿಸಲಾದಂತೆ ಸೇವಾ ದಾಖಲೆಗಳು, ಇಂದೀಕರಿಸಿದ ಅರ್ಜಿಗೆ ಸಂಬಂಧಿಸಿದಂತೆ ಅರ್ಜಿಯ ವಿವರಗಳನ್ನು ಪರಿಶೀಲಿಸತಕ್ಕದ್ದು ಮತ್ತು ವರ್ಗಾವಣೆಯ ವೇಳಾ ಪಟ್ಟಿಯನ್ನು ನಿರ್ದಿಷ್ಟಪಡಿಸುವ ಮುಂಚೆ ಅರ್ಹತೆಗೆ ಸಂಬಂಧಿಸಿದ ಶಿಫಾರಸ್ಸಿನೊಂದಿಗೆ ಮತ್ತು ತನ್ನ ಸಹಿಯೊಂದಿಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

**10. ಐಚ್ಛಿಕ ಅಥವಾ ಪರಸ್ಪರ ವರ್ಗಾವಣೆಗಳ ಅರ್ಹ ಮಾನದಂಡಗಳು.–** ಐಚ್ಛಿಕ ಅಥವಾ ಪರಸ್ಪರ ವರ್ಗಾವಣೆಗಳ ಕೋರಿಕೆಗಳಿಗೆ ಅನ್ವಯವಾಗುವ ಅರ್ಹ ಮಾನದಂಡಗಳು ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾದಂತೆ ಇರತಕ್ಕದ್ದು.

**ಕೋಷ್ಟಕ**

| ಕ್ರಮ ಸಂಖ್ಯೆ | ವರ್ಗಾವಣೆಯ ಬಗೆ | ಅರ್ಹ ಮಾನದಂಡಗಳು |
|---|---|---|
| 1 | ಜೇಷ್ಠತಾ ಘಟಕದೊಳಗೆ ಐಚ್ಛಿಕ ವರ್ಗಾವಣೆ | ಕನಿಷ್ಠ ಸೇವಾವಧಿಯನ್ನು ಪೂರ್ಣಗೊಳಿಸಿರಬೇಕು |
| 2 | ಅರ್ಜಿದಾರ ಶಿಕ್ಷಕನು, ಸರ್ಕಾರಿ ನೌಕರ ಅಥವಾ ಸರ್ಕಾರಿ ವಲಯದ ಕಂಪನಿ ಅಥವಾ ಸರ್ಕಾರಿ ಉತ್ತೇಜಿತ ಸಂಸ್ಥೆ ಅಥವಾ. ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರನ್ನು ವಿವಾಹವಾದ ಸಂದರ್ಭದಲ್ಲಿ, ಜೇಷ್ಠತಾ ಘಟಕದ ಹೊರಗೆ ಐಚ್ಛಿಕ ವರ್ಗಾವಣೆ.<br>(ಟಿಪ್ಪಣಿ: ಈ ಬಗೆಯ ವರ್ಗಾವಣೆಯು, ಭಾರತ ಸರ್ಕಾರದ ಅಥವಾ ಮೇಲೆ ನಮೂದಿಸಲಾದ ಸರ್ಕಾರದ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ನೌಕರರನ್ನು ವಿವಾಹಿತರಾದ ಶಿಕ್ಷಕರನ್ನು ಒಳಗೊಳ್ಳುವುದು.) | ಕನಿಷ್ಠ ಸೇವಾವಧಿಯು ಅನ್ವಯವಾಗುವುದಿಲ್ಲ. |
| 3 | ಮೇಲಿನ ಕ್ರಮ ಸಂಖ್ಯೆ 2 ರಲ್ಲಿ ಒಳಗೊಳ್ಳದಿರುವ ಶಿಕ್ಷಕರ ಸಂದರ್ಭಧಲ್ಲಿ ಜೇಷ್ಠತಾ ಘಟಕದ ಹೊರಗಡೆ ಐಚ್ಛಿಕ ವರ್ಗಾವಣೆ | ಕನಿಷ್ಠ ಸೇವಾವಧಿಯನ್ನು ಪೂರ್ಣಗೊಳಿಸಿರಬೇಕು |
| 4 | ಜೇಷ್ಠತಾ ಘಟಕದೊಳಗೆ ಪರಸ್ಪರ ವರ್ಗಾವಣೆ | (i) ಕನಿಷ್ಠ ಸೇವಾವಧಿಯು ಅನ್ವಯವಾಗುವುದಿಲ್ಲ.<br>(ii) ಪ್ರಸ್ತುತ ಹುದ್ದೆಯಲ್ಲಿ 'ಎ' ವಲಯದಲ್ಲಿ ಸತತವಾಗಿ ಏಳು ವರ್ಷಗಳಿಗೂ ಹೆಚ್ಚು ಸೇವೆಯನ್ನು ಪೂರ್ಣಗೊಳಿಸದಿರುವುದು.<br>(iii) ಕನಿಷ್ಠ ಮೂರು ವರ್ಷಗಳ ಸೇವೆಯು ಬಾಕಿಯಿರಬೇಕು. |
| 5 | ಜೇಷ್ಠತಾ ಘಟಕದ ಹೊರಗೆ ಪರಸ್ಪರ ವರ್ಗಾವಣೆ | (i) ಪ್ರಸ್ತುತ ಹುದ್ದೆಗಳಲ್ಲಿ ಕನಿಷ್ಠ ಮೂರು ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರಬೇಕು.<br>(ii) ನಿವೃತ್ತಿಗೂ ಮುಂಚೆ ಕನಿಷ್ಠ ಮೂರು ವರ್ಷಗಳ ಸೇವೆಯು ಬಾಕಿಯಿರಬೇಕು.<br>(iii) ಕೋರಿಕೆಯ ಹುದ್ದೆಯ ವಲಯಕ್ಕೆ ವರ್ಗಾವಣೆಯಾಗಲು ಅರ್ಹತೆಯಿರಬೇಕು.<br>(iv) ಪ್ರಸ್ತುತ ಹುದ್ದೆಯಲ್ಲಿ 'ಎ' ವಲಯದಲ್ಲಿ ಸತತವಾಗಿ ಏಳು ವರ್ಷಗಳಿಗೂ ಹೆಚ್ಚಿನ ಸೇವೆಯನ್ನು ಪೂರ್ಣಗೊಳಿಸದಿರುವುದು.<br>(v) ಈ ಮುಂಚೆ ಘಟಕದ ಹೊರಗೆ ಪರಸ್ಪರ ವರ್ಗಾವಣೆಯನ್ನು ಪಡೆದಿರಬಾರದು. |

11. ನಿರ್ದಿಷ್ಟಪಡಿಸಿದ ಪದವಿ-ಪೂರ್ವ ಕಾಲೇಜುಗಳಲ್ಲಿ ಪ್ರಾಂಶುಪಾಲರ ಹುದ್ದೆಗಳಿಗೆ ವರ್ಗಾವಣೆ.- ಅಧಿಸೂಚನೆಯ ಮೂಲಕ ಸರ್ಕಾರವು ನಿರ್ದಿಷ್ಟಪಡಿಸಿದ ಪಿಯುಸಿ ತರಗತಿಗಳಲ್ಲಿ ಮತ್ತು ಯಾವುದೇ ಇತರ ಕಾಲೇಜಿನಲ್ಲಿ 750 ಸಂಖ್ಯಾಬಲದ ವಿದ್ಯಾರ್ಥಿಗಳಿರುವ ಯಾವುದೇ ಕಾಲೇಜಿಗೆ ಪ್ರಾಂಶುಪಾಲರಾಗಿ ವರ್ಗಾವಣೆಯನ್ನು ಹೊಂದಲು ಮುಂದಿನ ಹೆಚ್ಚುವರಿ ಅರ್ಹತಾ ಅಗತ್ಯತೆಗಳು ಅನ್ವಯವಾಗತಕ್ಕದ್ದು, ಎಂದರೆ:-

(i) ಅಂಥ ಕಾಲೇಜಿಗೆ ವರ್ಗಾವಣೆಯನ್ನು ಕೋರುವ ಪ್ರಾಂಶುಪಾಲರು 250 ಅಥವಾ ಅದಕ್ಕೂ ಹೆಚ್ಚಿನ ಸಂಖ್ಯಾಬಲದ ವಿದ್ಯಾರ್ಥಿಗಳಿರುವ ಇತರೆ ಕಾಲೇಜುಗಳಲ್ಲಿ ಕನಿಷ್ಠ ಮೂರು ವರ್ಷಗಳ ಅವಧಿಗೆ ಕಾರ್ಯನಿರ್ವಹಿಸಿರಬೇಕು; ಮತ್ತು

(ii) ಆ ಕಾಲೇಜುಗಳ ಮೂರು-ವರ್ಷದ ಸರಾಸರಿ ಫಲಿತಾಂಶವು ಶೇಕಡಾ 60 ಕ್ಕಿಂತ ಹೆಚ್ಚಿರಬೇಕು.

12. ಆದ್ಯತಾ ಕ್ಲೇಮುಗಳಿಗಾಗಿ ಪೂರಕ ದಸ್ತಾವೇಜುಗಳು.- ವರ್ಗಾವಣೆಗಳು ಅಥವಾ ವರ್ಗಾವಣೆಗಳಿಂದ ವಿನಾಯಿತಿ ಪಡೆಯುವ ಆದ್ಯತಾ ಕ್ಲೇಮುಗಳಿಗೆ ಪೂರಕವಾಗಿ ಕೆಳಗಿನ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಲಾದಂತೆ ದಸ್ತಾವೇಜುಗಳು ಅಗತ್ಯವಾಗಿರತಕ್ಕದ್ದು.

ಕೋಷ್ಟಕ

| ಕ್ರಮ ಸಂಖ್ಯೆ | ಆದ್ಯತೆ ಅಥವಾ ವಿನಾಯಿತಿ ಕ್ಲೇಮು | ಪೂರಕ ದಸ್ತಾವೇಜುಗಳು |
|---|---|---|
| 1 | ಸರ್ಕಾರಿ ಅಥವಾ ಸಾರ್ವಜನಿಕ ಉದ್ಯಮ ಅಥವಾ ರಾಜ್ಯ ಅಥವಾ ಕೇಂದ್ರ ಸರ್ಕಾರದ ಮೂಲಕ ಸ್ಥಾಪಿಸಲಾದ ಸಂಘದ ನೌಕರರನ್ನು ವಿವಾಹಿತವಾಗಿರುವ ಶಿಕ್ಷಕರು (6(2)(1) ಮತ್ತು 6(2)(6)ನೇ ಪ್ರಕರಣ) | ಪತಿ/ ಪತ್ನಿಯ ನೇಮಕಾತಿ ಪ್ರಾಧಿಕಾರವು ನೀಡಿದ ಪ್ರಮಾಣಪತ್ರ |
| 2 | ಮಾರಕ ಕಾಯಿಲೆಯಿಂದ ಬಳಲುತ್ತಿರುವ ಶಿಕ್ಷಕ ಅಥವಾ ಪತಿ/ಪತ್ನಿ ಅಥವಾ ಮಗು | ಜಿಲ್ಲಾ ವೈದ್ಯಕೀಯ ಮಂಡಳಿಯ ಪ್ರಮಾಣಪತ್ರ |
| 3. | ಜೇಷ್ಠತಾ ಘಟಕದೊಳಗೆ ಚಿಕಿತ್ಸೆ ಸಿಗದಿರುವ ತೀವ್ರ ಅನಾರೋಗ್ಯದಿಂದ ಬಳಲುತ್ತಿರುವ ಶಿಕ್ಷಕ ಅಥವಾ ಪತಿ/ ಪತ್ನಿ ಅಥವಾ ಮಗು (6(2)(5)ನೇ ಪ್ರಕರಣದ ಪರಂತುಕ) | ಜಿಲ್ಲಾ ವೈದ್ಯಕೀಯ ಮಂಡಳಿಯ ಪ್ರಮಾಣಪತ್ರ |
| 4 | ತೆರೆದ ಹೃದಯ ಚಿಕಿತ್ಸೆ ಅಥವಾ ಅಂಗಾಂಗ ಕಸಿ ಚಿಕಿತ್ಸೆಗೆ ಒಳಗಾಗಿರುವ ಶಿಕ್ಷಕ | ಜಿಲ್ಲಾ ವೈದ್ಯಕೀಯ ಮಂಡಳಿಯ ಪ್ರಮಾಣಪತ್ರ |
| 5 | ಶೇಕಡಾ 40 ಕ್ಕಿಂತ ಹೆಚ್ಚು ಅಂಗವೈಕಲ್ಯವಿರುವ ವ್ಯಕ್ತಿ (3ಎ(1)ನೇ ಪ್ರಕರಣ ಮತ್ತು 6(2)(4)ನೇ ಪ್ರಕರಣದ ಪರಂತುಕ) | ಜಿಲ್ಲಾ ವೈದ್ಯಕೀಯ ಮಂಡಳಿಯ ಪ್ರಮಾಣಪತ್ರ |
| 6 | ಮನ್ನಣೆ ಪಡೆದ ಶಿಕ್ಷಕರು ಅಥವಾ ನೌಕರ ಸಂಘದ ಚುನಾಯಿತ ಪದಾಧಿಕಾರಿಗಳು (3ಎ(1)ನೇ ಪ್ರಕರಣದ ಪರಂತುಕ) | ಮನ್ನಣೆ ಪಡೆದ ಸಂಸ್ಥೆಯ ರಾಜ್ಯಾಧ್ಯಕ್ಷರಿಂದ ಪ್ರಮಾಣಪತ್ರ |
| 7 | ವಿಧವಾ ಮಹಿಳಾ ಶಿಕ್ಷಕಿ<br>(3ಎ(1) ಪ್ರಕರಣದ ಪರಂತುಕ ಮತ್ತು 6(2)(3)ನೇ ಪ್ರಕರಣ | ಪತಿಯ ಮರಣ ಪ್ರಮಾಣ ಪತ್ರ |
| 8 | ಭಾರತೀಯ ರಕ್ಷಣಾ ಪಡೆಗಳು ಅಥವಾ ಅರೆ-ಸೇನಾ ಪಡೆಗಳ ಹಾಲಿ ಅಥವಾ ಮಾಜಿ ಸೈನಿಕನ ಪತಿ-ಪತ್ನಿಯಾಗಿರುವ ಶಿಕ್ಷಕ | ಕಮಾಂಡಿಂಗ್ ಆಫೀಸರ್ ಅಥವಾ ನಿರ್ದೇಶಕರು, ಸೈನಿಕ ಕಲ್ಯಾಣ ಮಂಡಳಿಯಿಂದ ಪಡೆದ ಪ್ರಮಾಣ ಪತ್ರ. |

13. ಹೆಚ್ಚುವರಿ ಶಿಕ್ಷಕರ ಆದ್ಯತಾ ಪಟ್ಟಿ.- 4ನೇ ನಿಯಮದ (5)ನೇ ಉಪ-ನಿಯಮದ ಮೇರೆಗೆ ಗುರುತಿಸಲಾದ ಹೆಚ್ಚುವರಿ ಶಿಕ್ಷಕರ ವರ್ಗಾವಣೆಗಾಗಿನ ಆಂತರಿಕ ಜೇಷ್ಠತೆಯು ವಲಯದಲ್ಲಿನ ಅವರ ಜೇಷ್ಠತೆಯನ್ನು ಆಧರಿಸಿರತಕ್ಕದ್ದು. ಆ ವಲಯದಲ್ಲಿ ಹೆಚ್ಚು ವರ್ಷಗಳ ಸೇವೆ ಸಲ್ಲಿಸಿರುವಂಥ ಶಿಕ್ಷಕನನ್ನು ಆ ವಲಯದಲ್ಲಿ ಕಡಿಮೆ ವರ್ಷಗಳ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಿಂತ ಹಿರಿಯವನೆಂದು ಪರಿಗಣಿಸತಕ್ಕದ್ದು.

14. ಐಚ್ಛಿಕ ವರ್ಗಾವಣೆಗಳಿಗಾಗಿ ಆದ್ಯತೆ.- ಜೇಷ್ಠತಾ ಘಟಕದ ಒಳಗೆ ಅಥವಾ ಸಂದರ್ಭಾನುಸಾರವಾಗಿ ಹೊರಗೆ ಐಚ್ಛಿಕ ವರ್ಗಾವಣೆ ಕೋರಿದ ಅರ್ಹ ಕೋರಿಕೆಗಳನ್ನು ಈ ಮುಂದಿನ ಆದ್ಯತಾ ಕ್ರಮಗಳಲ್ಲಿ ತೆಗೆದುಕೊಳ್ಳತಕ್ಕದ್ದು.

(i) ಜೇಷ್ಠತಾ ಘಟಕದೊಳಗೆ ಚಿಕಿತ್ಸೆ ಸಿಗದಿರುವ ಮಾರಕ ಕಾಯಿಲೆಯಿಂದ ಬಳಲುತ್ತಿರುವ ಶಿಕ್ಷಕ ಅಥವಾ ಪತಿ-ಪತ್ನಿ ಅಥವಾ ಮಗು; ಮತ್ತು

(ii) ತೆರೆದ ಹೃದಯ ಚಿಕಿತ್ಸೆ ಅಥವಾ ಅಂಗಾಂಗ ಕಸಿ ಚಿಕಿತ್ಸೆಗೆ ಒಳಗಾಗಿರುವ ಶಿಕ್ಷಕ;

(iii) ಶೇಕಡ 40 ಕ್ಕೂ ಹೆಚ್ಚು ಅಂಗವೈಕಲ್ಯವಿರುವ ಶಿಕ್ಷಕ;

(iv) ಅವಲಂಬಿತ ಮಕ್ಕಳೊಂದಿಗೆ ಇರುವ ವಿಧವಾ ಮಹಿಳೆ ಅಥವಾ ವಿಚ್ಛೇಧಿತ ಶಿಕ್ಷಕ;

(v) ಭಾರತೀಯ ರಕ್ಷಣಾ ಪಡೆಗಳ ಅಥವಾ ಅರೆ-ಸೇನಾ ಪಡೆಗಳ ನಿವೃತ್ತಿ ಅಥವಾ ಖಾಯಂ ಅಂಗವಿಕಲ ಅಥವಾ ಮೃತ ಸೈನಿಕನ ಪತಿ/ ಪತ್ನಿಯಾಗಿರುವ ಶಿಕ್ಷಕ; (ಈ ಪ್ರವರ್ಗದ ಆದ್ಯತೆಯನ್ನು ಕೇವಲ ಒಮ್ಮೆ ಮಾತ್ರ ನೀಡತಕ್ಕದ್ದು)

(vi) ಭಾರತೀಯ ರಕ್ಷಣಾ ಪಡೆಗಳ ಅಥವಾ ಅರೆ-ಸೇನಾ ಪಡೆಗಳ ಸೈನಿಕನಾಗಿ ಸೇವೆ ಸಲ್ಲಿಸುತ್ತಿರುವವರ ಪತಿ/ ಪತ್ನಿಯಾಗಿರುವ ಶಿಕ್ಷಕ;

(vii) ಸರ್ಕಾರ ಅಥವಾ ಸಾರ್ವಜನಿಕ ಉದ್ಯಮ ಅಥವಾ ಸರ್ಕಾರದಿಂದ ಸ್ಥಾಪಿತವಾದ ಸಂಸ್ಥೆಯ ನೌಕರನ ಪತಿ/ ಪತ್ನಿಯಾಗಿರುವ ಶಿಕ್ಷಕ;

(viii) ಅನುದಾನಿತ ಶಿಕ್ಷಣ ಸಂಸ್ಥೆಯ ನೌಕರರ ಪತಿ/ ಪತ್ನಿಯಾಗಿರುವ ಶಿಕ್ಷಕ;

(ix) ಗರ್ಭಿಣಿ ಶಿಕ್ಷಕಿ ಅಥವಾ ಒಂದು ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಗು ಹೊಂದಿರುವ ಮಹಿಳಾ ಶಿಕ್ಷಕಿ;

(x) ಇತರೆ ಮಹಿಳಾ ಶಿಕ್ಷಕಿಯರು;

(xi) ಮನ್ನಣೆ ಪಡೆದ ಶಿಕ್ಷಕರ ಅಥವಾ ಸರ್ಕಾರಿ ನೌಕರ ಸಂಘದ ಚುನಾಯಿತ ಪದಾಧಿಕಾರಿಗಳು;

(xii) ಇತರೆ ಪುರುಷ ಶಿಕ್ಷಕರು.

**15. ಶಿಕ್ಷಕರ ಐಚ್ಛಿಕ ವರ್ಗಾವಣೆಗಳಿಗಾಗಿನ ಆಂತರಿಕ ಜೇಷ್ಠತೆಯ ಮಾನದಂಡಗಳು.–**

(1) 14ನೇ ನಿಯಮದಲ್ಲಿ ಪಟ್ಟಿ ಮಾಡಲಾದ ಪ್ರತಿಯೊಂದು ಆದ್ಯತೆಗಾಗಿ ಪ್ರವರ್ಗಗಳ ವರ್ಗಾವಣೆ ಪಟ್ಟಿಯನ್ನು, ಎ, ಬಿ ಮತ್ತು ಸಿ ವಲಯಗಳ ಶಾಲೆಗಳು ಅಥವಾ ಕಾಲೇಜುಗಳಲ್ಲಿ ಅಥವಾ ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳಲ್ಲಿ ಸೇವೆಯನ್ನು ಪೂರ್ಣಗೊಳಿಸಿದ ವರ್ಷಗಳಿಗೆ ಮುಂದಿನ ಸಂಪೂರ್ಣ ರೀತಿಯಲ್ಲಿ ಸೇವಾವಧಿಯಲ್ಲಿ, ಕೃಪಾಂಕಗಳನ್ನು ಅನ್ವಯಿಸಿದಾಗ ಪಡೆಯುವ ಜೇಷ್ಠತಾ ಅಂಕದ ಆಧಾರದ ಮೇಲೆ ಸಿದ್ಧಪಡಿಸತಕ್ಕದ್ದು.–

(i) ಎ ವಲಯದಲ್ಲಿ ಪೂರ್ಣಗೊಳಿಸಿದ ಸೇವಾವಧಿಗಾಗಿನ ಕೃಪಾಂಕ 1.0;

(ii) ಬಿ ವಲಯದಲ್ಲಿ ಪೂರ್ಣಗೊಳಿಸಿದ ಸೇವಾವಧಿಗಾಗಿನ ಕೃಪಾಂಕ 1.5; ಮತ್ತು

(iii) ಸಿ ವಲಯದಲ್ಲಿ ಪೂರ್ಣಗೊಳಿಸಿದ ಸೇವಾವಧಿಗಾಗಿನ ಕೃಪಾಂಕ 2.0.

(2) ಯಾವುದೇ ವಲಯದಲ್ಲಿ ಹೆಚ್ಚು ವರ್ಷಗಳು ಸೇವೆ ಸಲ್ಲಿಸಿರುವ ಶಿಕ್ಷಕನನ್ನು ಆ ವಲಯದಲ್ಲಿ ಕಡಿಮೆ ವರ್ಷಗಳು ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಿಂತ ಹಿರಿಯರೆಂದು ಪರಿಗಣಿಸತಕ್ಕದ್ದು.

(3) ಅಧಿನಿಯಮದ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರೂ ಸೇರಿದಂತೆ, ಆದರೆ ಪದವಿಪೂರ್ವ ಕಾಲೇಜುಗಳ ಪ್ರಾಂಶುಪಾಲರನ್ನು ಹೊರತುಪಡಿಸಿ, ಶಿಕ್ಷಕರ ವರ್ಗಾವಣೆಯ ಉದ್ದೇಶಕ್ಕಾಗಿ ಪಡೆದ ಜೇಷ್ಠತಾ ಅಂಕವು, ಕೃಪಾಂಕ ಮತ್ತು ಸಂಬಂಧಪಟ್ಟ ವಲಯಗಳಲ್ಲಿ ಪೂರ್ಣಗೊಳಿಸಿರುವ ಸೇವಾವರ್ಷಗಳ ಫಲಿತ ಮೊತ್ತವಾಗಿರತಕ್ಕದ್ದು.

(4) ಪದವಿ-ಪೂರ್ವ ಕಾಲೇಜುಗಳ ಪ್ರಾಂಶುಪಾಲರ ಸಂದರ್ಭದಲ್ಲಿ ಹಿಂದಿನ ಮೂರು ವರ್ಷಗಳ ಅವಧಿಯಲ್ಲಿ ಪ್ರಾಂಶುಪಾಲರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದ ಕಾಲೇಜುಗಳ ಕಾರ್ಯನಿರ್ವಹಣೆಗೆ ಅನುಸಾರವಾಗಿ ಈ ಮುಂದಿನ ಶ್ರೇಣಿಯ ಅನುಸಾರ ಹೆಚ್ಚುವರಿ ಅಂಕವನ್ನು ನೀಡತಕ್ಕದ್ದು.

(ಎ) ಪಿಯುಸಿ 2ನೇ ವರ್ಷದ ಮೂರು ವರ್ಷಗಳ ಸರಾಸರಿ ಫಲಿತಾಂಶವು ಶೇಕಡಾ 70 ಅಥವ ಅದಕ್ಕಿಂತ ಹೆಚ್ಚು ಇರುವ ಸಂದರ್ಭದಲ್ಲಿ ಹೆಚ್ಚುವರಿ ಅಂಕ 15;

(ಬಿ) ಪಿಯುಸಿ 2ನೇ ವರ್ಷದ ಮೂರು ವರ್ಷಗಳ ಸರಾಸರಿ ಫಲಿತಾಂಶವು ಶೇಕಡಾ 60 ಕ್ಕಿಂತ ಹೆಚ್ಚು ಆದರೆ ಶೇಕಡಾ 70 ಕ್ಕಿಂತ ಕಡಿಮೆ ಇದ್ದ ಸಂದರ್ಭದಲ್ಲಿ ಹೆಚ್ಚುವರಿ ಅಂಕ 10;

(ಸಿ) ಪಿಯುಸಿ 2ನೇ ವರ್ಷದ ಮೂರು ವರ್ಷದ ಸರಾಸರಿ ಫಲಿತಾಂಶವು ಶೇಕಡಾ 50 ಕ್ಕಿಂತ ಹೆಚ್ಚು ಆದರೆ ಶೇಕಡಾ 60 ಕ್ಕಿಂತ ಕಡಿಮೆ ಇದ್ದ ಸಂದರ್ಭದಲ್ಲಿ ಹೆಚ್ಚುವರಿ ಅಂಕ 5.

ಪರಂತು, ಯಾವೊಬ್ಬ ಪ್ರಾಂಶುಪಾಲನು ಹಿಂದಿನ ಮೂರು ವರ್ಷಗಳ ಅವಧಿಯಲ್ಲಿ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸದಿದ್ದರೆ ಹೆಚ್ಚುವರಿ ಅಂಕಗಳನ್ನು ಕ್ರಮಾನುಗತವಾಗಿ ಕಡಿತಗೊಳಿಸತಕ್ಕದ್ದು.

(5) ಪ್ರಾಂಶುಪಾಲರ ಆಂತರಿಕ ಜೇಷ್ಠತೆಯು, (1) ಮತ್ತು (2)ನೇ ಉಪ–ನಿಯಮಗಳ ಪ್ರಕಾರ ಅಂಕಗಳ ಮೊತ್ತ ಮತ್ತು (3)ನೇ ಉಪ–ನಿಯಮದ ಪ್ರಕಾರ ಹೆಚ್ಚುವರಿ ಅಂಕದ ಮೊತ್ತವಾಗಿರತಕ್ಕದ್ದು.

(6) ಪ್ರತಿಯೊಂದು ಆದ್ಯತಾ ಪ್ರವರ್ಗಗಳು, ಹೆಚ್ಚುವರಿ ಶಿಕ್ಷಕರು ಮತ್ತು ಕಡ್ಡಾಯ ವರ್ಗಾವಣೆಗಳಿಗಾಗಿ ಅನುಕ್ರಮವಾಗಿ ಪಡೆದುಕೊಂಡ ಜೇಷ್ಠತಾ ಅಂಕ, ಸೇವಾ ಜೇಷ್ಠತೆ ಮತ್ತು ಎ ವಲಯದ ಸೇವಾವಧಿಯ ಆಂತರಿಕ ಜೇಷ್ಠತಾ ಪಟ್ಟಿಗಳನ್ನು, ಅವರೋಹಣ ಕ್ರಮದಲ್ಲಿ ಸಿದ್ಧಪಡಿಸತಕ್ಕದ್ದು. ಎಂದರೆ, ಶಿಕ್ಷಕರ ಪಟ್ಟಿಯಲ್ಲಿ ಮೇಲಿನ ಸ್ಥಾನದಲ್ಲಿರುವ ಶಿಕ್ಷಕನು ಅವನ ಹುದ್ದೆಯನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಇತರರಿಗಿಂತ ಅವನಿಗೆ ಮೊದಲ ಆದ್ಯತೆ ನೀಡತಕ್ಕದ್ದು.

(7) ಅಂಕಗಳು ಸಮಾನವಾಗಿರುವ ಸಂದರ್ಭದಲ್ಲಿ ಸಂಬಂಧಪಟ್ಟ ಶಿಕ್ಷಕರ ಸೇವಾ ಜೇಷ್ಠತೆಯನ್ನು ಪರಿಗಣನೆಗಾಗಿ ತೆಗೆದುಕೊಳ್ಳತಕ್ಕದ್ದು. ಸೇವಾ ಜೇಷ್ಠತೆಯು ಸಹ ಸಮವಾಗಿದ್ದ ಸಂದರ್ಭದಲ್ಲಿ, ವಯಸ್ಸಿನಲ್ಲಿ ಹಿರಿಯರಾದ ಶಿಕ್ಷಕನು ವಯಸ್ಸಿನಲ್ಲಿ ಕಿರಿಯವನಾದ ಶಿಕ್ಷಕನಿಗಿಂತ ಮೇಲಿನ ಸ್ಥಾನದಲ್ಲಿಡತಕ್ಕದ್ದು.

**16. ಐಚ್ಛಿಕ ವರ್ಗಾವಣೆಗಾಗಿ ಆದ್ಯತೆಯ ಪಟ್ಟಿಗಳ ಸಿದ್ಧತೆ ಮತ್ತು ಪ್ರಕಟಣೆ.–** (1) ಸಕ್ಷಮ ಪ್ರಾಧಿಕಾರವು, 9ನೇ ನಿಯಮದ (4)ನೇ ಉಪನಿಯಮದನುಸಾರ ಸ್ವೀಕರಿಸಿದ ಅರ್ಜಿಗಳ ಪೈಕಿ ಅರ್ಹ ಶಿಕ್ಷಕರ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(2) ಸಕ್ಷಮ ಪ್ರಾಧಿಕಾರವು, 13 ಮತ್ತು 14ನೇ ನಿಯಮದ ಅನುಸಾರ ಜೇಷ್ಠತಾ ಅಂಕಗಳೊಂದಿಗೆ ತಾತ್ಕಾಲಿಕ ಆದ್ಯತಾ ಪಟ್ಟಿಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಆಕ್ಷೇಪಣೆಗಳು ಏನಾದರೂ ಇದ್ದರೆ ಐದು ದಿನಗಳೊಳಗೆ ಆಹ್ವಾನಿಸಿ, ಪಟ್ಟಿಯನ್ನು ಸೂಚನಾ ಫಲಕದ ಮೇಲೆ ಹಾಗೂ ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಪ್ರಕಟಿಸತಕ್ಕದ್ದು.

(3) ಐದು ದಿನ ಕಾಲಾವಧಿ ಮುಕ್ತಾಯದ ತರುವಾಯ, ಸಕ್ಷಮ ಪ್ರಾಧಿಕಾರವು, ಸ್ವೀಕರಿಸಲಾದ ಆಕ್ಷೇಪಣೆಗಳನ್ನು ಪರಿಗಣಿಸಿ, ಜೇಷ್ಠತಾ ಅಂಕಗಳೊಂದಿಗೆ ಅಂತಿಮ ಆದ್ಯತಾ ಪಟ್ಟಿಯನ್ನು ಸೂಚನಾ ಫಲಕದ ಮೇಲೆ ಹಾಗೂ ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಪ್ರಕಟಿಸತಕ್ಕದ್ದು.

**17. ಕಡ್ಡಾಯ ವರ್ಗಾವಣೆಗಳ ಆದ್ಯತಾ ಪಟ್ಟಿ.–** (1) ಕಡ್ಡಾಯ ವರ್ಗಾವಣೆಗಳಿಗಾಗಿ, 7ನೇ ನಿಯಮದ (6)ನೇ ಉಪ ನಿಯಮದನುಸಾರ ತಯಾರಿಸಲಾದ ಪಟ್ಟಿಯನ್ನು ಖಾಲಿ ಹುದ್ದೆಯಲ್ಲಿ 'ಎ' ವಲಯದಲ್ಲಿ ಸಲ್ಲಿಸಿದ ಸೇವಾವಧಿಯ ಆರೋಹಣಾ ಕ್ರಮದಲ್ಲಿ 'ಸಿ' ವಲಯದಲ್ಲಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವುದರ ಆಧಾರದ ಮೇಲೆ ರೂಪಿಸತಕ್ಕದ್ದು, ಶೇಕಡಾ ಹದಿನೈದರಷ್ಟು ಖಾಲಿ ಹುದ್ದೆಗಳನ್ನು ಹೊಂದಿರುವ ತಾಲೂಕಿಗೆ ಮೊದಲ ಆದ್ಯತೆ ನೀಡಿ ಹುದ್ದೆಗಳನ್ನು ಭರ್ತಿ ಮಾಡತಕ್ಕದ್ದು.

(2) 'ಎ' ವಲಯದಲ್ಲಿನ ಶಿಕ್ಷಕರು, ಅಧಿಕ ದಂಡನೆಗೊಳಗಾಗಿದ್ದರೆ ಅಥವಾ ಕ್ರಿಮಿನಲ್ ಆರೋಪಗಳು ಅಥವಾ ಶಿಸ್ತು ಕ್ರಮಗಳನ್ನು ಎದುರಿಸುತ್ತಿದ್ದರೆ, ಅಧಿನಿಯಮದ 3ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿನ ಕಡ್ಡಾಯ ವರ್ಗಾವಣೆಯ ಎಲ್ಲಾ ಶಿಕ್ಷಕರ ಹುದ್ದೆಗಳನ್ನು ನೇಮಕ ಮಾಡಿದ ತರುವಾಯ 'ಸಿ' ವಲಯದಲ್ಲಿ ಹುದ್ದೆಗಳನ್ನು ಆಯ್ಕೆ ಮಾಡಲು ಅವಕಾಶ ನೀಡತಕ್ಕದ್ದು.

**18. ಪರಸ್ಪರ ವರ್ಗಾವಣೆಗಳಿಗಾಗಿನ ಪ್ರಕ್ರಿಯೆ:**– (1) ಇಬ್ಬರೂ ಶಿಕ್ಷಕರೂ ಪರಸ್ಪರ ವರ್ಗಾವಣೆ ಕೋರಿದಾಗ, ತಮ್ಮ ಸಂಬಂಧಿತ ಅಧಿಕಾರ ಪತ್ರವನ್ನು ಬಳಸಿ ವರ್ಗಾವಣೆ ಪ್ರಕ್ರಿಯೆಯ ನಿಯಂತ್ರಣಾಧಿಕಾರಿಯು ನಿರ್ದಿಷ್ಟಪಡಿಸಿದ ರೀತಿಯಲ್ಲಿ ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಅರ್ಜಿ ಸಲ್ಲಿಸತಕ್ಕದ್ದು ಮತ್ತು ಇಬ್ಬರ ಕೆ.ಜಿ.ಐ.ಡಿ. ಸಂಖ್ಯೆಗಳೊಂದಿಗೆ ತಮ್ಮ ಅರ್ಜಿಗಳನ್ನು ಲಿಂಕ್ ಮಾಡತಕ್ಕದ್ದು.

(2) ಸಂಬಂಧಪಟ್ಟ ಶಿಕ್ಷಕರು, ಪ್ರಾಥಮಿಕ ಶಾಲೆ ಅಥವಾ ಮಾಧ್ಯಮಿಕ ಶಾಲೆ ಶಿಕ್ಷಕರು ಅಥವಾ ನಿರ್ದಿಷ್ಟಪಡಿಸಿದ ತತ್ಸಮಾನ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರೂ ಸೇರಿದಂತೆ ಮುಖ್ಯೋಪಾಧ್ಯಾಯರ ಸಂದರ್ಭದಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯ ಮೂಲಕ ಮತ್ತು ಪದವಿಪೂರ್ವ ಉಪನ್ಯಾಸಕರು ಅಥವಾ ಪ್ರಾಂಶುಪಾಲರ ಸಂದರ್ಭದಲ್ಲಿ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ತಮ್ಮ ಮುದ್ರಿತ ಹಾಗೂ ಸಹಿ ಮಾಡಿದ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

(3) ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿ ಅಥವಾ ಸಂದರ್ಭಾನುಸಾರವಾಗಿ, ಪದವಿಪೂರ್ವ ಶಿಕ್ಷಣದ ಇಲಾಖೆಯ ಉಪನಿರ್ದೇಶಕರು, ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಅಗತ್ಯಪಡಿಸಿದಂಥ ಸೇವಾದಾಖಲೆಗಳು, ಇಂದೀಕರಿಸಿದ ಅರ್ಜಿಗೆ ಸಂಬಂಧಿಸಿದಂತೆ ಅರ್ಜಿಯ ವಿವರಗಳನ್ನು ಪರಿಶೀಲಿಸತಕ್ಕದ್ದು ಮತ್ತು ಅರ್ಹತೆಗೆ ಸಂಬಂಧಿಸಿದ ಶಿಫಾರಸ್ಸಿನೊಂದಿಗೆ ಇಂದೀಕರಿಸಿದ ಮುದ್ರಿತ ಪ್ರತಿಯನ್ನು ತಮ್ಮ ಸಹಿಯೊಂದಿಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು.

(4) ಬೇರೆ ಬೇರೆ ಶಿಕ್ಷಕರು ಜೊತೆಯಾಗಿ ಪರಸ್ಪರ ವರ್ಗಾವಣೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದರೆ, ಅಂಥ ಅರ್ಜಿಗಳನ್ನು ತಿರಸ್ಕರಿಸತಕ್ಕದ್ದು.

(5) ಸಕ್ಷಮ ಪ್ರಾಧಿಕಾರವು ಅರ್ಹತೆಯನ್ನು ಪರಿಶೀಲಿಸತಕ್ಕದ್ದು ಮತ್ತು ಐದು ದಿನಗಳ ಒಳಗೆ ಆಕ್ಷೇಪಣೆಗಳನ್ನು ಆಹ್ವಾನಿಸಿ ಸೂಚನಾ ಫಲಕದ ಮೇಲೆ ಮತ್ತು ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಅರ್ಹ ಪ್ರಕರಣಗಳ ಕರಡು ಪಟ್ಟಿಯನ್ನು ಪ್ರಕಟಿಸತಕ್ಕದ್ದು.

(6) ಐದು ದಿನಗಳ ಅವಧಿ ಮುಗಿದ ತರುವಾಯ ಮತ್ತು ಸ್ವೀಕರಿಸಿದ ಆಕ್ಷೇಪಣೆಗಳು ಏನಾದರೂ ಇದ್ದರೆ ಅವುಗಳನ್ನು ಪರಿಗಣಿಸಿದ ಮೇಲೆ ಸಕ್ಷಮ ಪ್ರಾಧಿಕಾರವು ತನ್ನ ಸೂಚನಾ ಫಲಕದ ಮೇಲೆ ಹಾಗೂ ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಅಂತಿಮ ಅರ್ಹತೆಯ ಪಟ್ಟಿಯನ್ನು ಪ್ರಕಟಿಸತಕ್ಕದ್ದು.

(7) ಕೌನ್ಸಿಲಿಂಗ್ ಸಮಯದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಂದು ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರವು ಅವರ ಕೋರಿಕೆಯ ಅನುಮೋದನೆಗಾಗಿ ಇಬ್ಬರು ಶಿಕ್ಷಕರನ್ನು ಸಕ್ಷಮ ಪ್ರಾಧಿಕಾರದ ಸಮ್ಮುಖದಲ್ಲಿ ಖುದ್ದಾಗಿ ಹಾಜರುಪಡಿಸತಕ್ಕದ್ದು.

**19. ಕೌನ್ಸಿಲಿಂಗ್ ಮೂಲಕ ಜೇಷ್ಠತಾ ಘಟಕದ ಹೊರಗಿನ ವರ್ಗಾವಣೆಯ ಕೋರಿಕೆಗಳು:**– (1) ಜೇಷ್ಠತಾ ಘಟಕದ ಹೊರಗಿನ ವರ್ಗಾವಣೆಗಳನ್ನು, ಅಧಿನಿಯಮದ 6ನೇ ಪ್ರಕರಣದ (1) ಮತ್ತು (2)ನೇ ಉಪ ಪ್ರಕರಣಗಳಲ್ಲಿ ಒಳಗೊಂಡಿರುವ ಉಪಬಂಧಗಳ ಅನುಸಾರ ಅನುಮತಿಸತಕ್ಕದ್ದು.

(2) ಜೇಷ್ಠತೆಯ ಮತ್ತೊಂದು ಘಟಕಕ್ಕೆ ವರ್ಗಾವಣೆಗಳು, ಎರಡೂ ಘಟಕಗಳಲ್ಲಿನ ಮತ್ತು ತಾಲ್ಲೂಕಿನಲ್ಲಿನ ಸಂಬಂಧಪಟ್ಟ ಪ್ರವರ್ಗ ಅಥವಾ ವಿಷಯದ ಖಾಲಿ ಹುದ್ದೆಗಳ ಸಂಖ್ಯೆಯು ಸಂಬಂಧಪಟ್ಟ ಪ್ರವರ್ಗ ಅಥವಾ ವಿಷಯದ ಮಂಜೂರಾತಿ ಹುದ್ದೆಯ ಒಟ್ಟು ಸಂಖ್ಯೆಯ ಶೇಕಡಾ ಇಪ್ಪತ್ತಕ್ಕಿಂತ ಕಡಿಮೆ ಇದ್ದರೆ ಮತ್ತು ಯಾವ ಘಟಕಕ್ಕೆ ವರ್ಗಾವಣೆ ಕೋರಲಾಗಿದೆಯೋ ಆ ಘಟಕವು ಅಧಿಕ ಶಿಕ್ಷಕರನ್ನು ಹೊಂದಿಲ್ಲದಿದ್ದರೆ ಅಂಥ ಸಂದರ್ಭದಲ್ಲಿ ಮಾತ್ರ ಬಾಧಕವಾಗತಕ್ಕದ್ದು.

(3) ಅಂತರ್ ಘಟಕ ವರ್ಗಾವಣೆಗಾಗಿ ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಒಂದು ಪ್ರತ್ಯೇಕ ಅರ್ಜಿ ನಮೂನೆಯನ್ನು ಒದಗಿಸತಕ್ಕದ್ದು.

**20. ದೂರುಗಳ ಆಧಾರದ ಮೇಲೆ ವರ್ಗಾವಣೆಗಳು:**– ಶಿಕ್ಷಕರ ವಿರುದ್ಧ ಶಿಸ್ತು ಕ್ರಮ ಅಥವಾ ಕ್ರಿಮಿನಲ್ ವ್ಯವಹರಣೆಗಳು ಇತ್ಯರ್ಥದಲ್ಲಿರುವಾಗ ಮತ್ತು ಸಂಬಂಧಪಟ್ಟ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿ ಇರಿಸುವ ಬದಲಾಗಿ ಅವರನ್ನು ವರ್ಗಾಯಿಸಬಹುದೆಂದು ನೇಮಕ ಮಾಡುವ ಪ್ರಾಧಿಕಾರವು ಅಭಿಪ್ರಾಯಪಟ್ಟರೆ, ಕನಿಷ್ಠ ಸೇವಾವಧಿಯನ್ನು ಪೂರ್ಣಗೊಳಿಸದಿದ್ದರೂ ಅವರನ್ನು 'ಸಿ' ವಲಯದಲ್ಲಿನ ಹುದ್ದೆಗೆ ವರ್ಗಾವಣೆ ಮಾಡತಕ್ಕದ್ದು.

**21. ನಿರ್ದಿಷ್ಟ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ವರ್ಗಾವಣೆ:**– (1) ಅಧಿನಿಯಮದ 5ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರನ್ನು, ಐದು ವರ್ಷಗಳು ಪೂರ್ಣಗೊಳಿಸಿದ ತರುವಾಯ ಸಾಮಾನ್ಯ ವರ್ಗಾವಣೆ ಅವಧಿಯಲ್ಲಿ ಕಡ್ಡಾಯವಾಗಿ ವರ್ಗಾಯಿಸತಕ್ಕದ್ದು.

(2) ಅಧಿನಿಯಮದ 5ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಹುದ್ದೆಗಳಲ್ಲಿ ಮೂರು ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರನ್ನು ಸಹ, ಅವರ ಕಾರ್ಯನಿರ್ವಹಣೆ ಉತ್ತಮವಾಗಿಲ್ಲವೆಂದು ಕಂಡುಬಂದ ಸಂದರ್ಭದಲ್ಲಿ ವರ್ಗಾಯಿಸಬಹುದು.

(3) ಉಪನಿಯಮ (1) ಮತ್ತು (2)ರ ಅನುಸಾರ ವರ್ಗಾವಣೆಯಾಗಬೇಕಾದ ಶಿಕ್ಷಕರು, ಉಪನಿಯಮ (4)ಕ್ಕೆ ಒಳಪಟ್ಟು, ಐಚ್ಛಿಕ ವರ್ಗಾವಣೆಯ ಮೇರೆಗೆ ಆದ್ಯತೆ ನೀಡತಕ್ಕದ್ದು.

(4) ಮೇಲಿನ ಉಪನಿಯಮ (1) ಮತ್ತು (2)ರ ಅನುಸಾರ ಯಾವುದೇ ಶಿಕ್ಷಕರ ವರ್ಗಾವಣೆಯಾಗಬೇಕಾದ ಸಂದರ್ಭದಲ್ಲಿ, ಅವರು, 'ಎ' ವಲಯದಲ್ಲಿ ಸತತ ಹತ್ತು ವರ್ಷಗಳ ಸೇವೆಯನ್ನು ಸಂಪೂರ್ಣಗೊಳಿಸಿದ್ದರೆ, ಅಂಥ ಶಿಕ್ಷಕರಿಗೆ ಐಚ್ಛಿಕ ವರ್ಗಾವಣೆಗಳ ತರುವಾಯ ಮಾತ್ರ ಆದ್ಯತೆ ನೀಡತಕ್ಕದ್ದು ಮತ್ತು ಅವರನ್ನು 'ಸಿ' ವಲಯಕ್ಕೆ ನಿಯೋಜಿಸತಕ್ಕದ್ದು.

(5) ಅಧಿನಿಯಮದ 5ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಹುದ್ದೆಗಳಿಗಾಗಿ, ಸರ್ಕಾರವು ಅಧಿಸೂಚನೆಯ ಮೂಲಕ ಪಠ್ಯಕ್ರಮಗಳು ಮತ್ತು ಪರೀಕ್ಷೆಯ ಸ್ವರೂಪವನ್ನು ಗೊತ್ತುಪಡಿಸತಕ್ಕದ್ದು.

(6) ನಿಗದಿಪಡಿಸಿದ ಪರೀಕ್ಷೆಯನ್ನು ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯು ಕ್ಯಾಲೆಂಡರ್ ವರ್ಷದ ಕೊನೆಯ ತ್ರೈಮಾಸಿಕ ಅವಧಿಯಲ್ಲಿ

(7) ನಿರ್ದಿಷ್ಟಪಡಿಸಲಾದ ಹುದ್ದೆಗಳಿಗೆ ನಿಯೋಜಿಸುವುದಕ್ಕಾಗಿ ಅರ್ಹರೆಂದು ಪರಿಗಣಿಸಲು ನಿಗದಿಪಡಿಸಿದ ಪರೀಕ್ಷೆಯಲ್ಲಿ ಕನಿಷ್ಠ ಶೇಕಡಾ 60 ರಷ್ಟು ಅಂಕಗಳು ಅವಶ್ಯಕವಾಗಿರತಕ್ಕದ್ದು.

(8) ಪರೀಕ್ಷಾ ಫಲಿತಾಂಶವು ಮೂರು ವರ್ಷಗಳ ಕಾಲಾವಧಿಗೆ ಸಿಂಧುವಾಗಿರತಕ್ಕದ್ದು.

**22. ವರ್ಗಾವಣೆಗಳನ್ನು ನಡೆಸುವುದು:–** (1) ಎಲ್ಲಾ ವರ್ಗಾವಣೆಗಳನ್ನು ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಮಾಹಿತಿ ತಂತ್ರಜ್ಞಾನದೊಂದಿಗೆ ಆನ್‌ಲೈನ್ ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾತ್ರ ನಡೆಸತಕ್ಕದ್ದು.

(2) ಆದ್ಯತಾ ಪಟ್ಟಿಯಲ್ಲಿರುವ ಅರ್ಜಿದಾರರಿಗೆ ಪತ್ರಿಕಾ ಪ್ರಕಟಣೆಗಳು, ರೇಡಿಯೋ ಮತ್ತು ದೂರದರ್ಶನದಲ್ಲಿ ಘೋಷಣೆಯ ಮೂಲಕ ಕೌನ್ಸಿಲಿಂಗ್ ದಿನಾಂಕಗಳನ್ನು ತಿಳಿಸತಕ್ಕದ್ದು. ಕೌನ್ಸಿಲಿಂಗ್ ದಿನಾಂಕದಂದು ಅರ್ಜಿದಾರರನ್ನು ಅವರ ಆದ್ಯತಾ ಕ್ರಮದಲ್ಲಿ ಕರೆಯತಕ್ಕದ್ದು ಮತ್ತು ಕಂಪ್ಯೂಟರ್ ಪರದೆಯ ಮೇಲೆ ಪ್ರದರ್ಶಿಸಲಾದಂತೆ ಅಂಥ ಅಧಿವೇಶನದಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ ಯಾವುದೇ ಒಂದನ್ನು ಆಯ್ಕೆ ಮಾಡಲು ಕೇಳತಕ್ಕದ್ದು.

**23. ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾಡುವ ವರ್ಗಾವಣೆಗಳಿಗೆ ಸಂಬಂಧಿಸಿದ ಸಾಮಾನ್ಯ ಸೂಚನೆಗಳು:–** (1) ಶಿಕ್ಷಕರ ಐಚ್ಛಿಕ ಮತ್ತು ಪರಸ್ಪರ ವರ್ಗಾವಣೆಗಳನ್ನು ಅವರು ಪರಿವೀಕ್ಷಣಾ ಅವಧಿ ತೃಪ್ತಿಕರವಾಗಿ ಪೂರ್ಣಗೊಳಿಸಿದ ತರುವಾಯ ಮಾತ್ರ ಮಾಡತಕ್ಕದ್ದು.

(2) 6ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು, ಪರಸ್ಪರ ವರ್ಗಾವಣೆಗಳೂ ಸೇರಿದಂತೆ ಅಂತರ್–ಘಟಕದ ವರ್ಗಾವಣೆಗಳನ್ನು ಸರ್ಕಾರಿ ಸಿವಿಲ್ ಸೇವೆಗಳ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 16–ಎ ಮತ್ತು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಗಳು, 1957ರ 6ನೇ ನಿಯಮದಲ್ಲಿ ನಿರ್ದಿಷ್ಟಪಡಿಸಲಾದಂತೆ ಪರಿಗಣಿಸತಕ್ಕದ್ದು.

(3) ಅನುಚ್ಛೇದ 371ಜೆ ನಿಯಮಗಳು ಮತ್ತು ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಶಿಕ್ಷಕರ ವರ್ಗಾವಣೆಗೆ ಅನ್ವಯವಾಗತಕ್ಕದ್ದು.

(4) ವರ್ಗಾವಣೆಗಳನ್ನು, ಸಾರ್ವಜನಿಕ ಹಿತಾಸಕ್ತಿಯ ವರ್ಗಾವಣೆಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ಹೊರತುಪಡಿಸಿ, ಖಾಲಿ ಹುದ್ದೆಗಳಿಗೆ ಮಾತ್ರ ನಡೆಸತಕ್ಕದ್ದು.

(5) ಹೆಚ್ಚುವರಿ ಶಿಕ್ಷಕರು ಹೊಂದಿರುವ ಹುದ್ದೆಗಳನ್ನು, ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಯ ಪೂರ್ವಾನುಮೋದನೆಯೊಂದಿಗೆ ಮಾತ್ರ ಮರು ನಿಯೋಜಿಸತಕ್ಕದ್ದು.

(6) ಮಾನ್ಯತೆ ಪಡೆದ ಸರ್ಕಾರಿ ಶಿಕ್ಷಕರ ಸಂಘದ ಅಥವಾ ಸರ್ಕಾರಿ ನೌಕರರ ಸಂಘದ ಚುನಾಯಿತನಾದ ಪದಾಧಿಕಾರಿಗೆ ಅಧಿನಿಯಮದ 3ಎ ಪ್ರಕರಣದ ಅನುಸಾರ ಕಡ್ಡಾಯ ವರ್ಗಾವಣೆಯಿಂದ ನೀಡುವ ವಿನಾಯಿತಿಯನ್ನು ಕೇವಲ ಎರಡು ಅವಧಿಗೆ ಮಾತ್ರ ನೀಡತಕ್ಕದ್ದು. ಈ ಉದ್ದೇಶಕ್ಕಾಗಿ ಸಂಘವು, ಸಂಘಕ್ಕೆ ಚುನಾಯಿತರಾದ ಅದರ ಪದಾಧಿಕಾರಿಗಳ ಪಟ್ಟಿಯನ್ನು ಆದಷ್ಟು ಬೇಗ ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು. ಪಟ್ಟಿಯ ಒಂದು ಪ್ರತಿಯನ್ನು ಶಿಕ್ಷಕರ ವರ್ಗಾವಣೆ ಪೋರ್ಟಲ್‌ನಲ್ಲಿ ಸೇರಿಸುವುದಕ್ಕಾಗಿ ವರ್ಗಾವಣೆ ಪ್ರಕ್ರಿಯೆ ನಿಯಂತ್ರಣ ಅಧಿಕಾರಿಗಳಿಗೂ ಸಹ ಸಲ್ಲಿಸತಕ್ಕದ್ದು.

(7) ವಿಷಯವಾರು ಹುದ್ದೆಗಳನ್ನು ಸಂಬಂಧಪಟ್ಟ ವಿಷಯದ ಶಿಕ್ಷಕರನ್ನು ಮಾತ್ರ ನಿಯೋಜಿಸುವ ಮೂಲಕ ಭರ್ತಿ ಮಾಡತಕ್ಕದ್ದು.

(8) ಶಿಕ್ಷಕರ ಲಭ್ಯತೆಗೆ ಅನುಗುಣವಾಗಿ, ಈ ಕೆಳಗಿನ ವಿಷಯಗಳ ಶಿಕ್ಷಕರನ್ನು ಶಾಲೆ ಮತ್ತು ಕಾಲೇಜುಗಳಿಗೆ ನಿಯೋಜಿಸಲಾಗಿದೆಯೆಂದು ಎಲ್ಲಾ ಸಕ್ಷಮ ಪ್ರಾಧಿಕಾರಿಗಳು ಖಚಿತಪಡಿಸತಕ್ಕದ್ದು.

(ಎ) ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಭಾಷಾ ವಿಷಯಕ್ಕಾಗಿ ಕನಿಷ್ಠ ಒಬ್ಬ ಶಿಕ್ಷಕ ಮತ್ತು ಗಣಿತ ಮತ್ತು ವಿಜ್ಞಾನ ವಿಷಯಕ್ಕೆ ಒಬ್ಬ ಶಿಕ್ಷಕರು.

(ಬಿ) 7ನೇ ತರಗತಿವರೆಗಿನ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಭಾಷಾ ವಿಷಯಕ್ಕಾಗಿ ಕನಿಷ್ಠ ಒಬ್ಬ ಶಿಕ್ಷಕ ಮತ್ತು ಗಣಿತ ಮತ್ತು ವಿಜ್ಞಾನ ವಿಷಯಕ್ಕೆ ಒಬ್ಬ ಶಿಕ್ಷಕರು.

(ಸಿ) 8ನೇ ತರಗತಿಗಳವರೆಗಿನ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಭಾಷಾ ವಿಷಯಕ್ಕಾಗಿ ಕನಿಷ್ಠ ಒಬ್ಬ ಶಿಕ್ಷಕರು ಮತ್ತು ಗಣಿತ ಮತ್ತು ವಿಜ್ಞಾನಕ್ಕಾಗಿ ಒಬ್ಬ ಶಿಕ್ಷಕರು ಮತ್ತು ಸಮಾಜ ಅಧ್ಯಯನಕ್ಕಾಗಿ ಒಬ್ಬ ಶಿಕ್ಷಕರು.

(ಡಿ) ಪ್ರೌಢಶಾಲೆಗಳಲ್ಲಿ ಪಿ.ಸಿಎಮ್, ಇಂಗ್ಲೀಷ್, ಕನ್ನಡ, ಸಿ.ಬಿ.ಝಡ್, ಸಮಾಜ ಅಧ್ಯಯನ, ಹಿಂದಿ ಮತ್ತು ದೈಹಿಕ ಶಿಕ್ಷಣಕ್ಕಾಗಿ ಒಬ್ಬೊಬ್ಬ ಶಿಕ್ಷಕರು .

(ಇ) ಸಂಬಂಧಪಟ್ಟ ಪದವಿಪೂರ್ವ ಕಾಲೇಜುಗಳಲ್ಲಿ ಪ್ರತಿ ವಿಷಯಕ್ಕೆ ಒಬ್ಬ ಉಪನ್ಯಾಸಕ.

(9) ವಿದ್ಯಾರ್ಥಿಗಳ ಸಂಖ್ಯಾಬಲ ಕಡಿಮೆಯಿದ್ದ ಸಂದರ್ಭದಲ್ಲಿ, ಮತ್ತು ವಿಷಯ ಶಿಕ್ಷಕರ ಕೊರತೆಯಿದ್ದ ಸಂದರ್ಭದಲ್ಲಿ, ಹತ್ತಿರದ ಶಾಲೆಗಳಲ್ಲಿನ ಮತ್ತು ಪದವಿಪೂರ್ವ ಕಾಲೇಜುಗಳಲ್ಲಿನ ಕೆಲಸದ ಕಾರ್ಯಭಾರವನ್ನು ಹಂಚಿಕೆ ಮಾಡಲು ಸಕ್ಷಮ ಪ್ರಾಧಿಕಾರವು ವ್ಯವಸ್ಥೆ ಮಾಡತಕ್ಕದ್ದು.

(10) ವರ್ಗಾವಣೆಗಳನ್ನು ಮ್ಯಾನುವಲ್ ಕೌನ್ಸಿಲಿಂಗ್ ಮೂಲಕ ವರ್ಗಾಯಿಸುವುದನ್ನು ನಿಷೇಧಿತವಾಗಿದೆ. ಒಂದು ವೇಳೆ ಮ್ಯಾನುವಲ್ ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಮಾಡಿದ್ದರೆ ಅವು ಅಸಿಂಧುವೆಂದು ಪರಿಗಣಿಸತಕ್ಕದ್ದು ಮತ್ತು ಅಂಥ ವರ್ಗಾವಣೆಗಳಿಗೆ ಹೊಣೆಗಾರರಾದ ಅಧಿಕಾರಿಗಳು ಶಿಸ್ತುಕ್ರಮಕ್ಕೆ ಹೊಣೆಯಾಗತಕ್ಕದ್ದು.

**24. ಆದೇಶಗಳನ್ನು ಹೊರಡಿಸುವುದು:–** ಸಕ್ಷಮ ಪ್ರಾಧಿಕಾರವು, ಅರ್ಜಿದಾರನು ಆಯ್ಕೆ ಮಾಡಿಕೊಂಡ ಕೂಡಲೇ ಖಾಲಿಹುದ್ದೆಗಳ ಪಟ್ಟಿಯಿಂದ ಆ ಖಾಲಿ ಸ್ಥಾನವನ್ನು ಕ್ರಮವಾಗಿ ತೆಗೆದುಹಾಕಿ ವರ್ಗಾವಣೆಯ ಆದೇಶವನ್ನು ನೀಡತಕ್ಕದ್ದು. ಸಂಬಂಧಪಟ್ಟ ಪ್ರಾಧಿಕಾರಕ್ಕೆ ಅವಶ್ಯಕವಾಗಿ ಇದರ ಪ್ರತಿಯನ್ನು ಕಳುಹಿಸಬೇಕು ಮತ್ತು ಅರ್ಜಿದಾರನಿಗೂ ಇದರ ಪ್ರತಿಯನ್ನು ನೀಡತಕ್ಕದ್ದು.

**25. ಬಿಡುಗಡೆ:–** ವರ್ಗಾವಣೆ ಆದೇಶವನ್ನು ಪಡೆದಿರುವ ಶಿಕ್ಷಕರನ್ನು, ಅವರ ಸೇವಾ ವಿವರಗಳನ್ನು ಪರಿಶೀಲಿಸಿದ ತರುವಾಯ ಮಾತ್ರ ಸಕ್ಷಮ ಪ್ರಾಧಿಕಾರವು ಬಿಡುಗಡೆ ಮಾಡತಕ್ಕದ್ದು.

**26. ಕೌನ್ಸಿಲಿಂಗ್‌ನ್ನು ಪೂರ್ಣಗೊಳಿಸುವುದು:–** (1) ವರ್ಗಾವಣೆ ಪ್ರಕ್ರಿಯೆಗಳ ನಿಯಂತ್ರಣ ಅಧಿಕಾರಿಯು ತಿಳಿಯಪಡಿಸಿದ ಕಾಲಾವಧಿಯೊಳಗೆ, ವರ್ಗಾವಣೆಗಳ ಸಂಖ್ಯೆ ಮಿತಿಯನ್ನು ತಲುಪುವವರೆಗೆ ಅಥವಾ ಎಲ್ಲಾ ಅರ್ಜಿದಾರರು ಮುಗಿಯುವವರೆಗೆ ಈ ವರ್ಗಾವಣೆಯ ಕಾರ್ಯವು ಮುಂದುವರೆಯತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2017-19
Licensed to post without prepayment WPP No. 297



(2) ತಾಲ್ಲೂಕಿಗೆ ಸಂಬಂಧಪಟ್ಟ ಶಿಕ್ಷಕರ ವರ್ಗ ಅಥವಾ ವಿಷಯ ಶಿಕ್ಷಕರ ಒಟ್ಟು ಖಾಲಿ ಹುದ್ದೆಗಳು ಸಂಬಂಧಪಟ್ಟ ಹುದ್ದೆಗಳ ಮಂಜೂರಾತಿ ಸಂಖ್ಯೆಯ ಶೇಕಡಾ 20 ಕ್ಕಿಂತ ಕಡಿಮೆಯಿದ್ದರೆ ಮಾತ್ರ ಆ ತಾಲೂಕಿನಿಂದ ವರ್ಗಾವಣೆಯನ್ನು ಅನುಮತಿಸತಕ್ಕದ್ದು.

**27. ಸೂಚನಾ ಫಲಕದ ಮೇಲೆ ಪ್ರದರ್ಶಿಸುವುದು:-** ವರ್ಗಾವಣೆಗೊಂಡ ಶಿಕ್ಷಕರ ಪಟ್ಟಿಯಲ್ಲಿ, ಅವರ ಹೆಸರುಗಳ ಮುಂದೆ ವರ್ಗಾವಣೆಗೊಂಡ ಸ್ಥಳವನ್ನು ತೋರಿಸಿ ಸೂಚನಾ ಫಲಕದ ಮೇಲೆ ಸಹ ಪ್ರದರ್ಶಿಸತಕ್ಕದ್ದು. ಪಟ್ಟಿಯನ್ನು ಪ್ರದರ್ಶಿಸಿದ ತರುವಾಯ, ಯಾವುದೇ ವರ್ಗಾವಣೆಯನ್ನು ಮಾಡತಕ್ಕದ್ದಲ್ಲ. ಪಟ್ಟಿ ಪ್ರಕಟಿಸಿದ ತರುವಾಯ ಯಾವುದೇ ವರ್ಗಾವಣೆ ಮಾಡಲಾಗಿದ್ದರೆ, ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರವು ವೈಯಕ್ತಿಕವಾಗಿ ಹೊಣೆಯಾಗಿರತಕ್ಕದ್ದು ಮತ್ತು ಅವರ ವಿರುದ್ಧ ಶಿಸ್ತುಕ್ರಮವನ್ನು ಕೈಗೊಳ್ಳತಕ್ಕದ್ದು.

**28. ಅಧಿಕಾರಿಗಳ ಜವಾಬ್ದಾರಿಗಳು:-** ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರವು, ವರ್ಗಾವಣೆಗಳನ್ನು ಮಾಡುವಾಗ ಮೇಲಿನ ನಿಯಮಗಳನ್ನು ಅವಲೋಕಿಸಲಾಗಿದೆಯೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು ಮತ್ತು ಯಾವುದೇ ಬದಲಾವಣೆಗಳಿಗಾಗಿ ಅವರನ್ನು ವೈಯಕ್ತಿಕವಾಗಿ ಹೊಣೆಗಾರರನ್ನಾಗಿಸತಕ್ಕದ್ದು ಮತ್ತು ಅಂಥ ಅಧಿಕಾರಿಗಳ ವಿರುದ್ಧ ಅಧಿಕ ದಂಡ ವಿಧಿಸಲು ಶಿಸ್ತುಕ್ರಮ ಕೈಗೊಳ್ಳತಕ್ಕದ್ದು.

**29. ಸಾಮಾನ್ಯ ವರ್ಗಾವಣೆಗಳ ತರುವಾಯದ ವರ್ಗಾವಣೆಗಳು:-** (1) ಈ ಕೆಳಗಿನ ಸಂದರ್ಭಗಳಲ್ಲಿ ಮಾತ್ರ ಶೈಕ್ಷಣಿಕ ವರ್ಷದ ಅವಧಿಯಲ್ಲಿ ಶಿಕ್ಷಕರ ವರ್ಗಾವಣೆ ಮಾಡಲು ಇಲಾಖಾ ಮುಖ್ಯಸ್ಥರಿಗೆ ಅಧಿಕಾರ ನೀಡಲಾಗಿದೆ,-

(ಎ) ಶಿಸ್ತುಕ್ರಮ ಇತ್ಯರ್ಥದಲ್ಲಿರುವಾಗ ಅಮಾನತ್ತುಗೊಂಡಿರುವ ಸ್ಥಾನಕ್ಕೆ ವರ್ಗಾವಣೆ;

(ಬಿ) ಮುಂಬಡ್ತಿ ಪರಿಣಾಮವಾಗಿ ವರ್ಗಾವಣೆ; ಮತ್ತು

(ಸಿ) ನಿಯಮ 4 ರಲ್ಲಿ ನಿಗದಿಪಡಿಸಿದ ಪ್ರಕ್ರಿಯೆಗಳ ತರುವಾಯ ಹೆಚ್ಚುವರಿ ಹುದ್ದೆಗಳನ್ನು ಮತ್ತು ಶಿಕ್ಷಕರನ್ನು ಮರು ನಿಯೋಜಿಸುವುದರ ಪರಿಣಾಮವಾಗಿ ವರ್ಗಾವಣೆ.

(2) ಸಾಮಾನ್ಯ ವರ್ಗಾವಣೆಗಳು ಪೂರ್ಣಗೊಂಡ ತರುವಾಯ ನಿಯಮ 5ರ ಉಪನಿಯಮ (2)ರಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ಹುದ್ದೆಗಳು ಖಾಲಿ ಉಳಿದಿದ್ದರೆ, ಸರ್ಕಾರವು, ಗೊತ್ತುಪಡಿಸಿದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ಅರ್ಹ ಶಿಕ್ಷಕರನ್ನು ನಿಯೋಜಿಸಬಹುದು.

(3) ನಿಗದಿಪಡಿಸಿದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ಅರ್ಹ ಶಿಕ್ಷಕರು ಲಭ್ಯವಿಲ್ಲದಿರುವ ಸಂದರ್ಭದಲ್ಲಿ ಮತ್ತೊಮ್ಮೆ ಪರೀಕ್ಷೆಯನ್ನು ನಡೆಸುವವರೆಗೆ ಒಂದು ವರ್ಷ ಮೀರದ ಅವಧಿಗೆ ತಾತ್ಕಾಲಿಕವಾಗಿ ಮತ್ತೊಬ್ಬ ಶಿಕ್ಷಕನನ್ನು ಪ್ರಭಾರದಲ್ಲಿಡಬಹುದು.

(4) ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆಯ ಹೆಚ್ಚುವರಿ ಆಯುಕ್ತರ ಕಚೇರಿ, ಸರ್ವಶಿಕ್ಷಣ ಅಭಿಯಾನ ಮತ್ತು ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನದ ಮುಖ್ಯ ಕಛೇರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆಯ ಇತರ ರಾಜ್ಯಮಟ್ಟದ ಕಛೇರಿಗಳಾದ ಡಿ.ಎಸ್.ಇ.ಆರ್‌ಟಿ., ಕೆ.ಟಿ.ಬಿ.ಎಸ್., ಕೆ.ಎಸ್.ಇ.ಇ.ಬಿ ಮತ್ತು ಪದವಿಪೂರ್ವ ಶಿಕ್ಷಣ ನಿರ್ದೇಶನಾಲಯದಲ್ಲಿನ ಹುದ್ದೆಗಳು ಕೌನ್ಸಲಿಂಗ್ ಪ್ರಕ್ರಿಯೆಯನ್ನು ಹೊರತುಪಡಿಸಿದ ಆಯ್ಕೆಯ ಹುದ್ದೆಗಳಾಗಿರತಕ್ಕದ್ದು.

**30. ನಿರಸನ ಮತ್ತು ಉಳಿಸುವಿಕೆಗಳು:-** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) ನಿಯಮಗಳು, 2007 ನ್ನು ಈ ಮೂಲಕ ನಿರಸನಗೊಳಿಸಲಾಗಿದೆ.

ಪರಂತು, ಅಂಥ ನಿರಸನವು,-

(ಎ) ಸದರಿ ನಿಯಮಗಳ ಹಿಂದಿನ ಜಾರಿಗೆ ಅಥವಾ ಸದರಿ ನಿಯಮಗಳ ಮೇರೆಗೆ ಕ್ರಮಬದ್ಧವಾಗಿ ಮಾಡಿದ ಯಾವುದೇ ಕ್ರಮ ಅಥವಾ ಕೈಗೊಂಡ ಯಾವುದೇ ಕ್ರಮಕ್ಕೆ; ಅಥವಾ

(ಬಿ) ಸದರಿ ನಿಯಮಗಳ ಮೇರೆಗೆ ಈಗಾಗಲೇ ಆರ್ಜಿಸಿದ, ಪ್ರಾಪ್ತವಾದ ಅಥವಾ ವಹಿಸಿದ ಯಾವುದೇ ಹಕ್ಕು, ವಿಶೇಷಾಧಿಕಾರ, ಬಾಧ್ಯತೆ ಅಥವಾ ಹೊಣೆಗೆ

– ಬಾಧಕವಾಗತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಹೆಚ್.ಎಂ. ರಾಘವೇಂದ್ರ
ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಾಥಮಿಕ ಶಿಕ್ಷಣ)
ಶಿಕ್ಷಣ ಇಲಾಖೆ.

PR-654
SC-500

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59.

ಅನುಬಂಧ - 1

**LA/LC Question No: 705 - TALUK WISE**

| Sl.No | District | Block | Excess teachers opted within the working taluka | Excess teachers opted outside the working taluka | Total |
|---|---|---|---|---|---|
| 1 | BAGALKOTE | BADAMI | 20 | 3 | 23 |
| 2 | BAGALKOTE | BAGALKOT | 22 | 1 | 23 |
| 3 | BAGALKOTE | BILAGI | 8 | 0 | 8 |
| 4 | BAGALKOTE | HUNAGUND | 53 | 0 | 53 |
| 5 | BAGALKOTE | JAMAKHANDI | 23 | 0 | 23 |
| 6 | BAGALKOTE | MUDHOL | 14 | 0 | 14 |
| 7 | BALLARI | BALLARI EAST | 12 | 2 | 14 |
| 8 | BALLARI | BALLARI WEST | 18 | 0 | 18 |
| 9 | BALLARI | HADAGALI | 16 | 2 | 18 |
| 10 | BALLARI | HAGARIBOMMANAHALLI | 18 | 0 | 18 |
| 11 | BALLARI | HOSPET | 34 | 0 | 34 |
| 12 | BALLARI | KUDLIGI | 62 | 7 | 69 |
| 13 | BALLARI | SANDUR | 8 | 0 | 8 |
| 14 | BALLARI | SIRUGUPPA | 6 | 3 | 9 |
| 15 | BELAGAVI | BAILHONGAL | 18 | 0 | 18 |
| 16 | BELAGAVI | BELAGAVI CITY | 35 | 2 | 37 |
| 17 | BELAGAVI | BELAGAVI RURAL | 66 | 1 | 67 |
| 18 | BELAGAVI | KHANAPUR | 41 | 6 | 47 |
| 19 | BELAGAVI | KITTUR | 10 | 1 | 11 |
| 20 | BELAGAVI | RAMDURG | 7 | 0 | 7 |
| 21 | BELAGAVI | SOUNDATTI | 13 | 0 | 13 |
| 22 | BENGALURU NORTH | NORTH1 | 8 | 0 | 8 |
| 23 | BENGALURU NORTH | NORTH2 | 1 | 1 | 2 |
| 24 | BENGALURU NORTH | NORTH3 | 3 | 0 | 3 |
| 25 | BENGALURU NORTH | NORTH4 | 13 | 0 | 13 |
| 26 | BENGALURU RURAL | DEVANAHALLI | 28 | 1 | 29 |
| 27 | BENGALURU RURAL | DODDABALLAPURA | 33 | 4 | 37 |
| 28 | BENGALURU RURAL | HOSAKOTE | 27 | 4 | 31 |
| 29 | BENGALURU RURAL | NELAMANGALA | 11 | 0 | 11 |
| 30 | BENGALURU SOUTH | ANEKAL | 22 | 0 | 22 |
| 31 | BENGALURU SOUTH | SOUTH1 | 13 | 2 | 15 |
| 32 | BENGALURU SOUTH | SOUTH2 | 3 | 8 | 11 |
| 33 | BENGALURU SOUTH | SOUTH3 | 8 | 8 | 16 |
| 34 | BENGALURU SOUTH | SOUTH4 | 6 | 2 | 8 |
| 35 | BIDAR | AURAD | 44 | 0 | 44 |
| 36 | BIDAR | BASAVAKALYAN | 32 | 0 | 32 |
| 37 | BIDAR | BHALKI | 49 | 13 | 62 |
| 38 | BIDAR | BIDAR | 53 | 46 | 99 |
| 39 | BIDAR | HUMNABAD | 40 | 16 | 56 |
| 40 | CHAMARAJANAGAR | CHAMARAJA NAGAR | 59 | 10 | 69 |
| 41 | CHAMARAJANAGAR | GUNDULPET | 34 | 1 | 35 |
| 42 | CHAMARAJANAGAR | HANUR | 23 | 4 | 27 |
| 43 | CHAMARAJANAGAR | KOLLEGAL | 10 | 29 | 39 |
| 44 | CHAMARAJANAGAR | YELANDUR | 7 | 13 | 20 |
| 45 | CHIKKABALLAPURA | BAGEPALLY | 23 | 0 | 23 |
| 46 | CHIKKABALLAPURA | CHIKKABALLAPUR | 26 | 0 | 26 |
| 47 | CHIKKABALLAPURA | CHINTAMANI | 41 | 13 | 54 |
| 48 | CHIKKABALLAPURA | GOWRIBIDANUR | 20 | 18 | 38 |
| 49 | CHIKKABALLAPURA | GUDIBANDA | 8 | 0 | 8 |
| 50 | CHIKKABALLAPURA | SIDLAGHATTA | 26 | 1 | 27 |

| | | | | | |
|---|---|---|---|---|---|
| 51 | CHIKKAMANGALORE | BIRURU | 34 | 9 | 43 |
| 52 | CHIKKAMANGALORE | CHIKMAGALUR | 59 | 7 | 66 |
| 53 | CHIKKAMANGALORE | KADUR | 33 | 4 | 37 |
| 54 | CHIKKAMANGALORE | KOPPA | 12 | 5 | 17 |
| 55 | CHIKKAMANGALORE | MOODIGERE | 10 | 1 | 11 |
| 56 | CHIKKAMANGALORE | NARASIMHARAJAPURA | 13 | 0 | 13 |
| 57 | CHIKKAMANGALORE | SRINGERI | 4 | 3 | 7 |
| 58 | CHIKKAMANGALORE | TARIKERE | 44 | 0 | 44 |
| 59 | CHIKKODI | ATHANI | 15 | 0 | 15 |
| 60 | CHIKKODI | CHIKODI | 14 | 3 | 17 |
| 61 | CHIKKODI | GOKAK | 13 | 0 | 13 |
| 62 | CHIKKODI | HUKKERI | 30 | 1 | 31 |
| 63 | CHIKKODI | KAGWAD | 7 | 3 | 10 |
| 64 | CHIKKODI | MUDALGI | 5 | 0 | 5 |
| 65 | CHIKKODI | NIPPANI | 17 | 1 | 18 |
| 66 | CHIKKODI | RAIBAG | 13 | 1 | 14 |
| 67 | CHITRADURGA | CHALLAKERE | 32 | 4 | 36 |
| 68 | CHITRADURGA | CHITRADURGA | 41 | 12 | 53 |
| 69 | CHITRADURGA | HIRIYUR | 38 | 14 | 52 |
| 70 | CHITRADURGA | HOLALKERE | 18 | 14 | 32 |
| 71 | CHITRADURGA | HOSADURGA | 17 | 16 | 33 |
| 72 | CHITRADURGA | MOLAKALMUR | 10 | 1 | 11 |
| 73 | DAKSHINA KANNADA | BANTWAL | 36 | 8 | 44 |
| 74 | DAKSHINA KANNADA | BELTHANGADY | 14 | 2 | 16 |
| 75 | DAKSHINA KANNADA | MANGALORE NORTH | 14 | 0 | 14 |
| 76 | DAKSHINA KANNADA | MANGALORE SOUTH | 12 | 23 | 35 |
| 77 | DAKSHINA KANNADA | MOODABIDRE | 6 | 0 | 6 |
| 78 | DAKSHINA KANNADA | PUTTUR | 18 | 3 | 21 |
| 79 | DAKSHINA KANNADA | SULLIA | 15 | 1 | 16 |
| 80 | DAVANAGERE | CHANNAGIRI | 32 | 34 | 66 |
| 81 | DAVANAGERE | DAVANAGERE(N) | 18 | 2 | 20 |
| 82 | DAVANAGERE | DAVANAGERE(S) | 7 | 14 | 21 |
| 83 | DAVANAGERE | HARAPANAHALLI | 28 | 0 | 28 |
| 84 | DAVANAGERE | HARIHARA | 15 | 5 | 20 |
| 85 | DAVANAGERE | HONNALI | 16 | 7 | 23 |
| 86 | DAVANAGERE | JAGALUR | 32 | 0 | 32 |
| 87 | DHARWAD | DHARWAD | 16 | 0 | 16 |
| 88 | DHARWAD | DHARWAD CITY | 16 | 2 | 18 |
| 89 | DHARWAD | HUBLI | 27 | 0 | 27 |
| 90 | DHARWAD | HUBLI CITY | 30 | 0 | 30 |
| 91 | DHARWAD | KALGHATAGI | 20 | 0 | 20 |
| 92 | DHARWAD | KUNDAGOL | 17 | 0 | 17 |
| 93 | DHARWAD | NAVALGUND | 18 | 11 | 29 |
| 94 | GADAG | GADAG CITY | 11 | 20 | 31 |
| 95 | GADAG | GADAG RURAL | 13 | 5 | 18 |
| 96 | GADAG | MUNDARAGI | 8 | 0 | 8 |
| 97 | GADAG | NARAGUND | 13 | 6 | 19 |
| 98 | GADAG | RON | 26 | 0 | 26 |
| 99 | GADAG | SHIRHATTI | 22 | 0 | 22 |
| 100 | HASSAN | ALUR | 21 | 1 | 22 |
| 101 | HASSAN | ARAKALAGUDU | 22 | 0 | 22 |
| 102 | HASSAN | ARASIKERE | 58 | 24 | 82 |
| 103 | HASSAN | BELUR | 37 | 5 | 42 |
| 104 | HASSAN | CHANNARAYAPATNA | 40 | 7 | 47 |
| 105 | HASSAN | HASSAN | 30 | 24 | 54 |

| 106 | HASSAN | HOLENARASIPURA | 34 | 2 | 36 |
|---|---|---|---|---|---|
| 107 | HASSAN | SAKALESHAPURA | 19 | 5 | 24 |
| 108 | HAVERI | BYADAGI | 20 | 1 | 21 |
| 109 | HAVERI | HANAGAL | 26 | 0 | 26 |
| 110 | HAVERI | HAVERI | 26 | 4 | 30 |
| 111 | HAVERI | HIREKERUR | 35 | 7 | 42 |
| 112 | HAVERI | RANNEBENNUR | 23 | 6 | 29 |
| 113 | HAVERI | SAVANUR | 12 | 0 | 12 |
| 114 | HAVERI | SHIGGOAN | 21 | 0 | 21 |
| 115 | KALABURAGI | AFZALPUR | 12 | 3 | 15 |
| 116 | KALABURAGI | ALAND | 67 | 5 | 72 |
| 117 | KALABURAGI | CHINCHOLI | 19 | 3 | 22 |
| 118 | KALABURAGI | CHITTAPUR | 62 | 10 | 72 |
| 119 | KALABURAGI | JEWARGI | 13 | 1 | 14 |
| 120 | KALABURAGI | KALABURAGI NORTH | 20 | 46 | 66 |
| 121 | KALABURAGI | KALABURAGI SOUTH | 15 | 21 | 36 |
| 122 | KALABURAGI | SEDAM | 29 | 4 | 33 |
| 123 | KODAGU | MADIKERI | 0 | 0 | 0 |
| 124 | KODAGU | SOMAVARPET | 0 | 0 | 0 |
| 125 | KODAGU | VIRAJPET | 0 | 0 | 0 |
| 126 | KOLAR | BANGARAPETE | 28 | 0 | 28 |
| 127 | KOLAR | K G F | 12 | 5 | 17 |
| 128 | KOLAR | KOLAR | 28 | 0 | 28 |
| 129 | KOLAR | MALUR | 35 | 1 | 36 |
| 130 | KOLAR | MULBAGAL | 31 | 1 | 32 |
| 131 | KOLAR | SRINIVASAPUR | 42 | 0 | 42 |
| 132 | KOPPAL | GANGAVATHI | 19 | 0 | 19 |
| 133 | KOPPAL | KOPPAL | 31 | 1 | 32 |
| 134 | KOPPAL | KUSTAGI | 7 | 1 | 8 |
| 135 | KOPPAL | YELBURGA | 29 | 0 | 29 |
| 136 | MADHUGIRI | KORATAGERE | 16 | 0 | 16 |
| 137 | MADHUGIRI | MADHUGIRI | 24 | 1 | 25 |
| 138 | MADHUGIRI | PAVAGADA | 18 | 0 | 18 |
| 139 | MADHUGIRI | SIRA | 46 | 1 | 47 |
| 140 | MANDYA | KRISHNARAJA PET | 33 | 0 | 33 |
| 141 | MANDYA | MADDUR | 29 | 1 | 30 |
| 142 | MANDYA | MALAVALLY | 21 | 0 | 21 |
| 143 | MANDYA | MANDYA NORTH | 7 | 0 | 7 |
| 144 | MANDYA | MANDYA SOUTH | 8 | 23 | 31 |
| 145 | MANDYA | NAGAMANGALA | 15 | 10 | 25 |
| 146 | MANDYA | PANDAVAPURA | 15 | 0 | 15 |
| 147 | MANDYA | SRIRANGA PATNA | 12 | 0 | 12 |
| 148 | MYSURU | H.D.KOTE | 40 | 2 | 42 |
| 149 | MYSURU | HUNSUR | 28 | 0 | 28 |
| 150 | MYSURU | K.R.NAGARA | 17 | 6 | 23 |
| 151 | MYSURU | MYSORE NORTH | 24 | 4 | 28 |
| 152 | MYSURU | MYSORE RURAL | 30 | 19 | 49 |
| 153 | MYSURU | MYSORE SOUTH | 4 | 4 | 8 |
| 154 | MYSURU | NANJANAGUD | 40 | 4 | 44 |
| 155 | MYSURU | PERIYA PATNA | 12 | 17 | 29 |
| 156 | MYSURU | T.N.PURA | 42 | 2 | 44 |
| 157 | RAICHUR | DEVADURGA | 2 | 2 | 4 |
| 158 | RAICHUR | LINGASUGUR | 30 | 1 | 31 |
| 159 | RAICHUR | MANVI | 14 | 1 | 15 |
| 160 | RAICHUR | RAICHUR | 44 | 3 | 47 |

| | | | | | |
|---|---|---|---|---|---|
| 161 | RAICHUR | SINDHANUR | 41 | 3 | 44 |
| 162 | RAMANAGARA | CHANNAPATNA | 35 | 9 | 44 |
| 163 | RAMANAGARA | KANAKAPURA | 22 | 3 | 25 |
| 164 | RAMANAGARA | MAGADI | 25 | 4 | 29 |
| 165 | RAMANAGARA | RAMANAGARA | 17 | 0 | 17 |
| 166 | SHIVAMOGGA | BHADRAVATI | 31 | 24 | 55 |
| 167 | SHIVAMOGGA | HOSANAGAR | 22 | 1 | 23 |
| 168 | SHIVAMOGGA | SAGAR | 22 | 6 | 28 |
| 169 | SHIVAMOGGA | SHIKARIPUR | 34 | 0 | 34 |
| 170 | SHIVAMOGGA | SHIVAMOGGA | 37 | 34 | 71 |
| 171 | SHIVAMOGGA | SORAB | 20 | 0 | 20 |
| 172 | SHIVAMOGGA | THIRTHAHALLI | 14 | 13 | 27 |
| 173 | SIRSI | HALIYAL | 12 | 3 | 15 |
| 174 | SIRSI | JOIDA | 5 | 2 | 7 |
| 175 | SIRSI | MUNDAGOD | 8 | 0 | 8 |
| 176 | SIRSI | SIDDAPUR | 15 | 12 | 27 |
| 177 | SIRSI | SIRSI | 42 | 20 | 62 |
| 178 | SIRSI | YELLAPUR | 9 | 7 | 16 |
| 179 | TUMKUR | CHIKKANAYAKANAHALLI | 16 | 0 | 16 |
| 180 | TUMKUR | GUBBI | 23 | 0 | 23 |
| 181 | TUMKUR | KUNIGAL | 19 | 1 | 20 |
| 182 | TUMKUR | TIPTUR | 9 | 3 | 12 |
| 183 | TUMKUR | TUMKUR | 45 | 7 | 52 |
| 184 | TUMKUR | TURUVEKERE | 14 | 2 | 16 |
| 185 | UDUPI | BRAHAMAVARA | 9 | 1 | 10 |
| 186 | UDUPI | BYNDOOR | 28 | 3 | 31 |
| 187 | UDUPI | KARKALA | 12 | 2 | 14 |
| 188 | UDUPI | KUNDAPURA | 13 | 1 | 14 |
| 189 | UDUPI | UDUPI | 10 | 0 | 10 |
| 190 | UTTARKANNADA | ANKOLA | 22 | 1 | 23 |
| 191 | UTTARKANNADA | BHATKAL | 20 | 0 | 20 |
| 192 | UTTARKANNADA | HONNAVAR | 46 | 3 | 49 |
| 193 | UTTARKANNADA | KARWAR | 17 | 7 | 24 |
| 194 | UTTARKANNADA | KUMTA | 28 | 2 | 30 |
| 195 | VIJAYAPURA | BASAVAN BAGEWADI | 38 | 1 | 39 |
| 196 | VIJAYAPURA | CHADACHAN | 28 | 16 | 44 |
| 197 | VIJAYAPURA | INDI | 26 | 3 | 29 |
| 198 | VIJAYAPURA | MUDDEBIHAL | 31 | 0 | 31 |
| 199 | VIJAYAPURA | SINDAGI | 38 | 0 | 38 |
| 200 | VIJAYAPURA | VIJAYAPURA RURAL | 44 | 1 | 45 |
| 201 | VIJAYAPURA | VIJAYAPURA CITY | 9 | 7 | 16 |
| 202 | YADAGIRI | SHAHAPUR | 5 | 0 | 5 |
| 203 | YADAGIRI | SHORAPUR | 0 | 0 | 0 |
| 204 | YADAGIRI | YADGIR | 29 | 10 | 39 |
| | | **TOTAL** | **4638** | **965** | **5603** |

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 13 ಪಿಎಂಎ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:12-03-2020.

216
U/S
12/03/2020

ಇಂದ:

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ :

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
ವಿಧಾನಸೌಧ,
ಬೆಂಗಳೂರು-01.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಯಶವಂತಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:715 ಕ್ಕೆ ಉತ್ತರ ನೀಡುವ ಕುರಿತು.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ವಿಧಾನ ಪರಿಷತ್ ಸದಸ್ಯರಾದ ಶ್ರೀ ಯಶವಂತಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ) ರವರು ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:715 ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಎಂ. ಶರಣಬಸಪ್ಪ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪ್ರಾಥಮಿಕ ಶಿಕ್ಷಣ) ಶಿಕ್ಷಣ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 715

ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)

ಉತ್ತರಿಸಬೇಕಾದ ದಿನಾಂಕ : 12-03-2020

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಸ್ತುತ ರಾಜ್ಯದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಅನುಪಾತ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | • ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ :ವಿದ್ಯಾರ್ಥಿಗಳ ಅನುಪಾತ 1:13.38 (ಪ್ರತಿ 14 ಮಕ್ಕಳಿಗೆ ಒಬ್ಬ ಶಿಕ್ಷಕರು ಇರುತ್ತಾರೆ)<br>• ಸರ್ಕಾರಿಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಕರ:ವಿದ್ಯಾರ್ಥಿಗಳ ಅನುಪಾತ 1:23.73 (ಪ್ರತಿ 24 ಮಕ್ಕಳಿಗೆ ಒಬ್ಬ ಶಿಕ್ಷಕರು ಇರುತ್ತಾರೆ)<br>ರಾಜ್ಯದ ಸರ್ಕಾರಿ ಪ್ರೌಢಶಾಲೆಗಳಲ್ಲಿ ಆದೇಶ ಸಂಖ್ಯೆ:ಇಡಿ 69 ಎಲ್‌ಬಿಪಿ 2011 ಬೆಂಗಳೂರು ದಿನಾಂಕ:01-04-2011ರನ್ವಯ ಶಿಕ್ಷಕರನ್ನು ವಿಭಾಗಗಳಿಗೆ ಅನುಸಾರವಾಗಿ ಒದಗಿಸಲಾಗುತ್ತಿದೆ. ಒಂದು ವಿಭಾಗಕ್ಕೆ 70 ವಿದ್ಯಾರ್ಥಿಗಳನ್ನು ನಿಗಧಿಪಡಿಸಲಾಗಿದ್ದು, ವಿದ್ಯಾರ್ಥಿ:ವಿಭಾಗ ಅನುಪಾತ 70:1 ಇರುತ್ತದೆ. ಕನಿಷ್ಠ 03 ವಿಭಾಗಗಳಿದ್ದಲ್ಲಿ 05 ವಿಷಯ ಶಿಕ್ಷಕರು ಹಾಗೂ 01 ಮುಖ್ಯ ಶಿಕ್ಷಕರನ್ನು ಒದಗಿಸಲಾಗುತ್ತದೆ. (ಜಿಲ್ಲಾವಾರು ಶಿಕ್ಷಕರು ಹಾಗೂ ವಿಭಾಗವಾರು ಪಟ್ಟಿ ಅನುಬಂಧ-1ರಲ್ಲಿ ಲಗತ್ತಿಸಿದೆ.) |
| ಆ. | ಸದರಿ ಅನುಪಾತದಲ್ಲಿ ಅವೈಜ್ಞಾನಿಕ ಅನುಪಾತ ಇರುವುದು ಸರ್ಕಾರ ಗಮನಿಸಿದೆಯೇ; | ಪ್ರಾಥಮಿಕ ಶಾಲೆಗಳಲ್ಲಿ ಕಡ್ಡಾಯ ಶಿಕ್ಷಣ ಕಾಯ್ದೆಯನ್ವಯ ಮಕ್ಕಳ ಶಿಕ್ಷಕರ ಅನುಪಾತವನ್ನು ನಿರ್ಧರಿಸಲಾಗಿರುತ್ತದೆ. ಆರ್.ಟಿ.ಇ ಕಾಯ್ದೆಯಲ್ಲಿನ ನಿಗದಿಯಂತೆ ವೈಜ್ಞಾನಿಕವಾದ ವಿದ್ಯಾರ್ಥಿ:ಶಿಕ್ಷಕರ ಅನುಪಾತ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ 30:1 ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ 35:1 ಹುದ್ದೆಗಳನ್ನು ಶಾಲೆಗಳಿಗೆ ಹಂಚಿಕೆ ಮಾಡಲಾಗಿದೆ. |

| | | |
|---|---|---|
| | | ಸರ್ಕಾರಿ ಪ್ರೌಢಶಾಲೆಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ:ಇಡಿ 69 ಎಲ್‌ಪಿಪಿ 2011, ದಿನಾಂಕ:01-04-2011ರನ್ವಯ ಅನುಪಾತ ಇರುತ್ತದೆ. |
| ಇ. | ಇದ್ದಲ್ಲಿ, ಈ ಅವೈಜ್ಞಾನಿಕತೆಗೆ ಕಾರಣಗಳೇನು? ಈ ಅವೈಜ್ಞಾನಿಕ ಅನುಪಾತದಿಂದಾಗಿ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಹಿನ್ನಡೆಯಾಗುತ್ತಿರುವುದು ಸರ್ಕಾರ ಗಮನಿಸಿದೆಯೇ; | ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಅವೈಜ್ಞಾನಿಕತೆ ಇರುವುದಿಲ್ಲ ಹಾಗೂ ಇದರಿಂದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಯಾವುದೇ ಹಿನ್ನಡೆಯಾಗಿರುವುದಿಲ್ಲ. |
| ಈ. | ಹಾಗಿದ್ದಲ್ಲಿ, ವೈಜ್ಞಾನಿಕವಾಗಿ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಅನುಪಾತ ಎಷ್ಟು; | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಡ್ಡಾಯ ಶಿಕ್ಷಣ ಕಾಯ್ದೆಯನ್ವಯ ಮಕ್ಕಳ ಶಿಕ್ಷಕರ ಅನುಪಾತವನ್ನು ನಿರ್ಧರಿಸಲಾಗಿರುತ್ತದೆ. ಆರ್.ಟಿ.ಇ ಕಾಯ್ದೆಯಲ್ಲಿನ ನಿಗಧಿಯಂತೆ ವೈಜ್ಞಾನಿಕವಾದ ವಿದ್ಯಾರ್ಥಿ:ಶಿಕ್ಷಕರ ಅನುಪಾತ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ 30:1 ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ 35:1 ಹುದ್ದೆಗಳನ್ನು ಶಾಲೆಗಳಿಗೆ ಹಂಚಿಕೆ ಮಾಡಲಾಗಿದೆ.<br>ಸರ್ಕಾರಿ ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಅನುಪಾತ 70:1 ಇರುತ್ತದೆ. |
| ಉ. | ಖಾಲಿ ಇರುವ ಶಿಕ್ಷಕರ ಹುದ್ದೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳ ಸಂಖ್ಯೆ : 21811 (ಪ್ರತಿ ಲಗತ್ತಿಸಿದೆ.)<br>ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳ ಸಂಖ್ಯೆ : 5065 (ಪ್ರತಿ ಲಗತ್ತಿಸಿದೆ.) |
| ಊ. | ಸದರಿ ಹುದ್ದೆಗಳನ್ನು ಯಾವ ಕಾಲಮಿತಿಯೊಳಗೆ ಭರ್ತಿ ಮಾಡಿಕೊಳ್ಳಲಾಗುವುದು? (ವಿವರ ನೀಡುವುದು) | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಈಗಾಗಲೇ ಇತ್ತೀಚಿನ ನೇಮಕಾತಿ ಪ್ರಕ್ರಿಯೆಯಲ್ಲಿ 1994 ಅಭ್ಯರ್ಥಿಗಳು ಆಯ್ಕೆಯಾಗಿದ್ದು, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮಕ್ಕೆಗೊಳ್ಳಲಾಗಿದೆ ಉಳಿಕೆಯಾಗುವ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮಕ್ಕೆಗೊಳ್ಳಲಾಗುತ್ತಿದೆ.<br>ಸರ್ಕಾರಿ ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಅನುಮತಿ ನೀಡಲು ಪರಿಶೀಲಿಸಲಾಗುತ್ತಿದೆ. |

**ಇಪಿ 13 ಪಿಎಂಎ 2020**

(ಎಸ್. ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

ಅನುಬಂಧ-1

**Government Primary Schools - Sanctioned and Working strength**

**(Approximation based on RTE requirement and Sanctioned Cadre strength of 188540**

| Sl.No. | District | As per DISE appropximation and minor adjustments for 188540 - | As par DISE appropximation | As per DISE appropximation | PET | Music | Drawing | Total Sanctioned |
|---|---|---|---|---|---|---|---|---|
| | | AM (round of) including Minority + Malenadu+Nursery) | AM for NaliKali | HM (as per rationalisation ) | PET | Music | Drawing | |
| 1 | BAGALKOT | 6374 | 70 | 783 | 253 | 1 | 7 | 7488 |
| 2 | BALLARI | 7219 | 75 | 788 | 293 | 6 | 7 | 8380 |
| 3 | BELAGAVI | 6479 | 238 | 732 | 260 | 4 | 8 | 7741 |
| 4 | BELAGAVI CHIKKODI | 7986 | 221 | 930 | 318 | 6 | 8 | 9479 |
| 5 | BENGALURU RURAL | 2937 | 31 | 235 | 100 | 2 | 4 | 3309 |
| 6 | BENGALURU U NORTH | 2304 | 44 | 210 | 64 | 5 | 7 | 2624 |
| 7 | BENGALURU U SOUTH | 3780 | 49 | 366 | 162 | 20 | 7 | 4384 |
| 8 | BIDAR | 4917 | 226 | 631 | 240 | 8 | 6 | 6028 |
| 9 | CHAMARAJANAGARA | 2620 | 16 | 325 | 123 | 3 | 3 | 3090 |
| 10 | CHIKKABALLAPURA | 3867 | 52 | 391 | 160 | 7 | 6 | 4403 |
| 11 | CHIKKAMANGALURU | 3810 | 34 | 314 | 306 | 23 | 7 | 4494 |
| 12 | CHITRADURGA | 5326 | 52 | 607 | 267 | 11 | 6 | 6269 |
| 13 | DAKSHINA KANNADA | 3661 | 0 | 484 | 291 | 4 | 7 | 4447 |
| 14 | DAVANAGERE | 4985 | 69 | 628 | 263 | 12 | 7 | 5982 |
| 15 | DHARWAD | 4236 | 71 | 522 | 207 | 2 | 10 | 5047 |
| 16 | GADAG | 3181 | 29 | 411 | 175 | 1 | 8 | 3805 |
| 17 | HASSAN | 5981 | 54 | 368 | 201 | 13 | 6 | 6623 |
| 18 | HAVERI | 5096 | 132 | 658 | 260 | 3 | 5 | 6153 |
| 19 | KALBURGI | 8422 | 157 | 943 | 336 | 3 | 11 | 9874 |
| 20 | KODAGU | 1289 | 1 | 166 | 113 | 2 | 3 | 1573 |
| 21 | KOLAR | 4695 | 91 | 377 | 153 | 5 | 6 | 5328 |
| 22 | KOPPAL | 5312 | 32 | 545 | 158 | 14 | 5 | 6066 |
| 23 | MANDYA | 4540 | 27 | 450 | 207 | 13 | 7 | 5244 |
| 24 | MYSURU | 6376 | 63 | 779 | 323 | 20 | 8 | 7566 |
| 25 | RAICHUR | 7120 | 62 | 750 | 202 | 18 | 8 | 8160 |
| 26 | RAMANAGARA | 3230 | 54 | 258 | 104 | 4 | 6 | 3652 |
| 27 | SHIVAMOGGA | 5687 | 56 | 594 | 212 | 15 | 8 | 6572 |
| 28 | TUMAKURU | 6322 | 70 | 414 | 218 | 6 | 13 | 6043 |
| 29 | TUMAKURU MADHUGIRI | 3467 | 30 | 408 | 151 | 6 | 5 | 4067 |
| 30 | UDUPI | 2044 | 0 | 240 | 134 | 3 | 4 | 2425 |
| 31 | UTTARA KANNADA | 2684 | 40 | 227 | 114 | 4 | 4 | 3073 |
| 32 | UTTARA KANNADA SIRSI | 3378 | 32 | 272 | 103 | 2 | 2 | 3787 |
| 33 | VIJAYAPURA | 8416 | 193 | 956 | 224 | 8 | 11 | 9808 |
| 34 | YADAGIRI | 4865 | 59 | 453 | 135 | 4 | 2 | 5518 |
| 35 | Total | 161580 | 2460 | 17256 | 6772 | 253 | 224 | 188540 |

ನಿರ್ದೇಶಕರು (ಪ್ರಾಥಮಿಕ ಶಿಕ್ಷಣ)
ಸಾ.ಶಿ.ಇಲಾಖೆ, ಆಯುಕ್ತರ ಕಛೇರಿ
ಬೆಂಗಳೂರು.

| ಒಟ್ಟು ಖಾಲಿ ಇರುವ ಹುದ್ದೆಗಳ ಸಂಖ್ಯೆ (ಆಯಾ ವೃಂದವಾರು) | | | ಒಟ್ಟು ಖಾಲಿ ಇರುವ ಹುದ್ದೆಗಳ ಸಂಖ್ಯೆ | ಶಾಲೆ ಮಾತೆ ಹುದ್ದೆಗಳ ಮೂಲ ಸಂಖ್ಯೆಯಲ್ಲಿ ನಿವೃತ್ತಿಯಾಗಿರುವ ಹುದ್ದೆಗಳ ಸಂಖ್ಯೆ (ಸದರಿ ಹುದ್ದೆಗಳು ಶಾಲಾ ಮಾತೆಯವರ ನಿವೃತ್ತಿ ನಂತರ ತನ್-ತಾನೆ ರದ್ದಾಗುತ್ತವೆ) (ಕಾಲಂ 23) | ಷರಾ |
|---|---|---|---|---|---|
| ದೈಹಿಕ ಶಿಕ್ಷಕ ಹುದ್ದೆ | ಸಂಗೀತ ಶಿಕ್ಷಕ ಹುದ್ದೆ | ಶಾಲೆ ಮಾತೆ ಹುದ್ದೆಗಳ | | | |
| 21 | 22 | 23 | 24 | 25 | 26 |
| | | | | | |
| ಒಟ್ಟು | | | | | |

(ಡಾ॥ ಪಿ.ಸಿ.ಜಾಫರ್)
ಆಯುಕ್ತರು

ಇವರಿಗೆ,

1. ರಾಜ್ಯದ ಎಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ಅಗತ್ಯ ಕ್ರಮಕ್ಕಾಗಿ
2. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ಅಗತ್ಯ ಕ್ರಮಕ್ಕಾಗಿ (ಉಪನಿರ್ದೇಶಕರ ಮುಖಾಂತರ)

ಪ್ರತಿಯನ್ನು

1. ಮಾನ್ಯ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ, ಕರ್ನಾಟಕ ಸರ್ಕಾರ, ಬಹು ಮಹಡಿಗಳ ಕಟ್ಟಡ, ಬೆಂಗಳೂರು, ಇವರಿಗೆ ಗೌರವಪೂರ್ವಕವಾಗಿ ಮಾಹಿತಿಗಾಗಿ ಸಲ್ಲಿಸಿದೆ.
2. ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಮತ್ತು ರಾಷ್ಟ್ರೀಯ ಮಾಧ್ಯಮಿಕ ಶಿಕ್ಷಣ ಅಭಿಯಾನ, ಬೆಂಗಳೂರು
3. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಿಗೆ
4. ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಕಲಬುರಗಿ / ಧಾರವಾಡ
5. ಹಿರಿಯ ಸಹಾಯಕ ನಿರ್ದೇಶಕರು, ಡೈಸ್ ಶಾಖೆ, ಅಗತ್ಯ ಕ್ರಮಗಳನ್ನು ಕೈಗೊಂಡು ಜಿಲ್ಲೆಗಳಿಗೆ ಶಾಲಾವಾರು ಶಿಕ್ಷಕ ಹುದ್ದೆಗಳ ಹಂಚಿಕೆ ಮಾದರಿಯನ್ನು ನೀಡಲು ತಿಳಿಸಿದೆ.
6. ಹಿರಿಯ ಸಹಾಯಕ ನಿರ್ದೇಶಕರು, ಇ-ಆಡಳಿತ ವಿಭಾಗ, ಆಯುಕ್ತರ ಕಛೇರಿ, ಬೆಂಗಳೂರು, ಇವರಿಗೆ ಅಗತ್ಯ ಕ್ರಮಕ್ಕಾಗಿ.
7. ಕ/ಪ್ರ,

(ಡಾ॥ ಪಿ.ಸಿ.ಜಾಫರ್)
ಆಯುಕ್ತರು

## DISTRICT WISE SECONDARY VACANCIES AS ON OCTOBER 01 2019 - 11AM AS PER TRANSFER SOFTWARE

| SL.No | DISTRICT | AM | | | | | | | | | | | | | | | | | | | | | | | PE | | SPL | TOTAL |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | LANGUAGE_KANNADA | LANGUAGE_URDU | LANGUAGE_MARATI | LANGUAGE_TELUGU | LANGUAGE_TAMIL | LANGUAGE_ENGLISH | LANGUAGE_HINDI | LANGUAGE_SANSKRIT | ARTS_KANNADA | ARTS_URDU | ARTS_MARATI | ARTS_TELUGU | ARTS_TAMIL | PCM_KANNADA | PCM_URDU | PCM_MARATI | PCM_TELUGU | PCM_TAMIL | CBZ_KANNADA | CBZ_URDU | CBZ_MARATI | CBZ_TELUGU | CBZ_TAMIL | PE_GRADE1 | PE_GRADE2 | special | |
| 1 | BELAGAVI | 50 | 3 | 3 | 0 | 0 | 58 | 13 | 0 | 8 | 0 | 2 | 0 | 0 | 0 | 1 | 0 | 0 | 0 | 6 | 1 | 0 | 0 | 0 | 16 | 0 | 4 | 165 |
| 2 | BAGALKOTE | 42 | 3 | 2 | 0 | 0 | 71 | 31 | 0 | 24 | 1 | 0 | 0 | 0 | 22 | 0 | 0 | 0 | 0 | 13 | 1 | 0 | 0 | 0 | 30 | 0 | 8 | 248 |
| 3 | VIJAYAPURA | 18 | 0 | 0 | 0 | 0 | 29 | 25 | 0 | 18 | 1 | 0 | 0 | 0 | 4 | 0 | 0 | 0 | 0 | 10 | 0 | 0 | 0 | 0 | 22 | 0 | 6 | 133 |
| 4 | KALABURAGI | 51 | 8 | 0 | 0 | 0 | 71 | 48 | 0 | 6 | 1 | 1 | 0 | 0 | 28 | 0 | 0 | 0 | 0 | 34 | 2 | 0 | 0 | 0 | 59 | 2 | 7 | 318 |
| 5 | BIDAR | 29 | 14 | 12 | 0 | 0 | 50 | 12 | 0 | 4 | 0 | 0 | 0 | 0 | 7 | 4 | 0 | 0 | 0 | 20 | 1 | 1 | 0 | 0 | 30 | 0 | 2 | 186 |
| 6 | RAICHUR | 94 | 4 | 0 | 0 | 0 | 99 | 43 | 0 | 17 | 0 | 0 | 0 | 0 | 60 | 2 | 0 | 0 | 0 | 45 | 2 | 0 | 0 | 0 | 32 | 0 | 13 | 411 |
| 7 | KOPPAL | 68 | 3 | 0 | 0 | 0 | 83 | 32 | 0 | 0 | 0 | 0 | 0 | 0 | 54 | 3 | 0 | 0 | 0 | 33 | 0 | 0 | 0 | 0 | 34 | 0 | 9 | 319 |
| 8 | GADAG | 20 | 3 | 0 | 0 | 0 | 27 | 16 | 0 | 14 | 0 | 0 | 0 | 0 | 5 | 1 | 0 | 0 | 0 | 6 | 0 | 0 | 0 | 0 | 15 | 0 | 1 | 108 |
| 9 | DHARWAD | 26 | 1 | 0 | 0 | 0 | 25 | 14 | 0 | 1 | 0 | 0 | 0 | 0 | 0 | 1 | 0 | 0 | 0 | 0 | 0 | 0 | 0 | 0 | 9 | 0 | 3 | 80 |
| 10 | UTTARKANNADA | 0 | 1 | 0 | 0 | 0 | 15 | 1 | 0 | 0 | 0 | 0 | 0 | 0 | 0 | 1 | 0 | 0 | 0 | 0 | 1 | 0 | 0 | 0 | 1 | 0 | 0 | 20 |
| 11 | HAVERi | 14 | 6 | 0 | 0 | 0 | 20 | 14 | 0 | 0 | 1 | 0 | 0 | 0 | 4 | 1 | 0 | 0 | 0 | 4 | 3 | 0 | 0 | 0 | 17 | 1 | 6 | 91 |
| 12 | BALLARI | 111 | 5 | 0 | 4 | 1 | 158 | 36 | 0 | 49 | 0 | 0 | 0 | 0 | 8 | 3 | 0 | 2 | 0 | 24 | 4 | 0 | 0 | 1 | 48 | 0 | 23 | 477 |
| 13 | CHITRADURGA | 16 | 1 | 0 | 0 | 0 | 14 | 0 | 0 | 5 | 0 | 0 | 0 | 0 | 0 | 0 | 0 | 0 | 0 | 2 | 1 | 0 | 0 | 0 | 10 | 0 | 5 | 54 |
| 14 | DAVANAGERE | 7 | 1 | 0 | 0 | 0 | 25 | 0 | 0 | 0 | 1 | 0 | 0 | 0 | 1 | 0 | 0 | 0 | 0 | 0 | 1 | 0 | 0 | 0 | 7 | 0 | 6 | 49 |
| 15 | SHIVAMOGGA | 12 | 2 | 0 | 0 | 0 | 62 | 1 | 0 | 0 | 2 | 0 | 0 | 1 | 0 | 0 | 0 | 0 | 0 | 1 | 2 | 0 | 0 | 1 | 11 | 0 | 4 | 99 |
| 16 | UDUPI | 7 | 0 | 0 | 0 | 0 | 24 | 7 | 0 | 14 | 0 | 0 | 0 | 0 | 0 | 0 | 0 | 0 | 0 | 6 | 0 | 0 | 0 | 0 | 5 | 0 | 8 | 71 |
| 17 | CHIKKAMANGALORE | 16 | 1 | 0 | 0 | 0 | 32 | 3 | 0 | 28 | 0 | 0 | 0 | 0 | 0 | 0 | 0 | 0 | 0 | 2 | 0 | 0 | 0 | 0 | 11 | 0 | 4 | 97 |
| 18 | TUMKUR | 20 | 0 | 0 | 0 | 0 | 24 | 0 | 0 | 9 | 0 | 0 | 0 | 0 | 0 | 0 | 0 | 0 | 0 | 6 | 0 | 0 | 0 | 0 | 16 | 1 | 5 | 81 |
| 19 | KOLAR | 34 | 1 | 0 | 0 | 0 | 20 | 5 | 0 | 11 | 1 | 0 | 0 | 0 | 0 | 0 | 0 | 0 | 0 | 8 | 1 | 0 | 0 | 0 | 20 | 0 | 10 | 111 |
| 20 | BENGALURU SOUTH | 11 | 0 | 0 | 0 | 0 | 15 | 3 | 0 | 5 | 1 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 14 | 0 | 2 | 51 |
| 21 | BENGALURU RURAL | 1 | 0 | 0 | 0 | 0 | 7 | 1 | 0 | 6 | 0 | 0 | 0 | 0 | 0 | 0 | 0 | 0 | 0 | 1 | 0 | 0 | 0 | 0 | 1 | 0 | 0 | 17 |
| 22 | MANDYA | 20 | 0 | 0 | 0 | 0 | 55 | 21 | 0 | 14 | 0 | 0 | 0 | 0 | 0 | 0 | 0 | 0 | 0 | 22 | 0 | 0 | 0 | 0 | 34 | 0 | 7 | 173 |

|  |  | LANGUAGE_KANNADA | LANGUAGE_URDU | LANGUAGE_MARATI | LANGUAGE_TELUGU | LANGUAGE_TAMIL | LANGUAGE_ENGLISH | LANGUAGE_HINDI | LANGUAGE_SANSKRIT | ARTS_KANNADA | ARTS_URDU | ARTS_MARATI | ARTS_TELUGU | ARTS_TAMIL | PCM_KANNADA | PCM_URDU | PCM_MARATI | PCM_TELUGU | PCM_TAMIL | CBZ_KANNADA | CBZ_URDU | CBZ_MARATI | CBZ_TELUGU | CBZ_TAMIL | PE_GRADE1 | PE_GRADE2 | special |  |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| 23 | HASSAN | 23 | 0 | 0 | 0 | 0 | 90 | 0 | 0 | 27 | 0 | 0 | 0 | 0 | 0 | 0 | 0 | 0 | 0 | 18 | 0 | 0 | 0 | 0 | 48 | 0 | 2 | 208 |
| 24 | DAKSHINA KANNADA | 33 | 1 | 0 | 0 | 0 | 68 | 28 | 0 | 9 | 0 | 0 | 0 | 0 | 0 | 0 | 0 | 0 | 0 | 2 | 0 | 0 | 0 | 0 | 32 | 0 | 1 | 174 |
| 25 | KODAGU | 8 | 0 | 0 | 0 | 0 | 8 | 9 | 0 | 4 | 0 | 0 | 0 | 0 | 0 | 0 | 0 | 0 | 0 | 3 | 0 | 0 | 0 | 0 | 4 | 0 | 2 | 38 |
| 26 | MYSURU | 27 | 0 | 0 | 0 | 0 | 72 | 18 | 0 | 12 | 0 | 0 | 0 | 0 | 0 | 0 | 0 | 0 | 0 | 6 | 0 | 0 | 0 | 0 | 7 | 0 | 4 | 146 |
| 27 | CHAMARAJANAGAR | 10 | 1 | 0 | 0 | 0 | 54 | 9 | 0 | 1 | 0 | 0 | 0 | 0 | 0 | 0 | 0 | 0 | 0 | 7 | 0 | 0 | 0 | 0 | 10 | 0 | 3 | 95 |
| 28 | BENGALURU NORTH | 3 | 0 | 0 | 1 | 0 | 6 | 0 | 0 | 2 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 5 | 0 | 0 | 17 |
| 29 | CHIKKABALLAPURA | 23 | 1 | 0 | 0 | 0 | 31 | 8 | 0 | 12 | 1 | 0 | 0 | 0 | 3 | 0 | 0 | 0 | 0 | 14 | 1 | 0 | 0 | 0 | 8 | 0 | 3 | 105 |
| 30 | CHIKKODI | 91 | 0 | 4 | 0 | 0 | 115 | 26 | 0 | 49 | 0 | 0 | 0 | 0 | 61 | 0 | 0 | 0 | 0 | 27 | 2 | 0 | 0 | 0 | 31 | 0 | 10 | 416 |
| 31 | MADHUGIRI | 19 | 1 | 0 | 0 | 0 | 45 | 0 | 0 | 9 | 0 | 0 | 0 | 0 | 0 | 0 | 0 | 0 | 0 | 12 | 0 | 0 | 0 | 0 | 15 | 0 | 0 | 101 |
| 32 | RAMANAGARA | 18 | 3 | 0 | 0 | 0 | 26 | 3 | 0 | 8 | 0 | 0 | 0 | 0 | 0 | 0 | 0 | 0 | 0 | 2 | 2 | 0 | 0 | 0 | 5 | 0 | 1 | 68 |
| 33 | YADAGIRI | 54 | 8 | 0 | 1 | 0 | 60 | 21 | 0 | 3 | 0 | 0 | 0 | 0 | 44 | 3 | 0 | 0 | 0 | 20 | 2 | 0 | 1 | 0 | 21 | 0 | 14 | 252 |
| 34 | SIRSI | 13 | 5 | 1 | 0 | 0 | 39 | 9 | 0 | 0 | 1 | 0 | 0 | 0 | 6 | 0 | 0 | 0 | 0 | 2 | 1 | 0 | 0 | 0 | 6 | 0 | 3 | 86 |
|  | **TOTAL** | 989 | 77 | 22 | 6 | 1 | 1598 | 457 | 0 | 369 | 11 | 3 | 0 | 1 | 307 | 20 | 0 | 2 | 0 | 356 | 28 | 1 | 1 | 2 | 634 | 4 | 176 | 5065 |

ನಿರ್ದೇಶಕರು
(ಪ್ರೌಢ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ
ಹೊಸ ಸಾರ್ವಜನಿಕ ಕಛೇರಿ
ನೃಪತುಂಗ ರಸ್ತೆ, ಬೆಂಗಳೂರು - 1

# ಜಿಲ್ಲಾವಾರು ಮತ್ತು ವಿಷಯವಾರು ಶಿಕ್ಷಕರ ಮಂಜೂರಾತಿ ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಪ್ರೌಢ ಶಾಲೆಗಳು | ಮುಖ್ಯ ಶಿಕ್ಷಕರು | ಪ್ರಥಮ ಭಾಷೆ | ದ್ವಿತೀಯ ಭಾಷೆ | ತೃತೀಯ ಭಾಷೆ | ಗಣಿತ | ವಿಜ್ಞಾನ | ಸಮಾಜ ವಿಜ್ಞಾನ | ದೈಹಿಕ ಶಿಕ್ಷಕರು | ವಿಶೇಷ ಶಿಕ್ಷಕರು | ಒಟ್ಟು ಶಿಕ್ಷಕರು | ವಿಭಾಗಗಳು |
|---|---|---|---|---|---|---|---|---|---|---|---|---|---|
| 1 | ಬಾಗಲಕೋಟೆ | 186 | 186 | 361 | 264 | 176 | 358 | 216 | 330 | 194 | 42 | 2127 | 867 |
| 2 | ಬಳ್ಳಾರಿ | 230 | 229 | 361 | 310 | 215 | 402 | 225 | 363 | 245 | 55 | 2405 | 1034 |
| 3 | ಬೆಳಗಾವಿ | 130 | 130 | 188 | 158 | 124 | 203 | 141 | 192 | 134 | 23 | 1293 | 546 |
| 4 | ಬೆಳಗಾವಿ ಚಿಕ್ಕೋಡಿ | 182 | 182 | 294 | 232 | 158 | 306 | 189 | 284 | 191 | 59 | 1895 | 901 |
| 5 | ಬೆಂಗಳೂರು ಗ್ರಾಮಾಂತರ | 64 | 63 | 106 | 93 | 78 | 107 | 82 | 105 | 67 | 14 | 715 | 277 |
| 6 | ಬೆಂಗಳೂರು ಉತ್ತರ. | 58 | 58 | 119 | 99 | 74 | 119 | 81 | 118 | 66 | 16 | 750 | 288 |
| 7 | ಬೆಂಗಳೂರು ದಕ್ಷಿಣ | 86 | 86 | 182 | 150 | 115 | 170 | 127 | 170 | 90 | 21 | 1111 | 386 |
| 8 | ಬೀದರ್ | 166 | 166 | 435 | 238 | 108 | 317 | 189 | 309 | 167 | 7 | 1936 | 549 |
| 9 | ಚಾಮರಾಜನಗರ | 86 | 86 | 119 | 110 | 89 | 132 | 86 | 123 | 86 | 7 | 838 | 309 |
| 10 | ಚಿಕ್ಕಾಬಳ್ಳಾಪುರ | 111 | 111 | 168 | 156 | 107 | 183 | 108 | 173 | 115 | 13 | 1134 | 405 |
| 11 | ಚಿಕ್ಕಮಗಳೂರು | 116 | 116 | 177 | 165 | 155 | 178 | 159 | 178 | 117 | 12 | 1257 | 416 |
| 12 | ಚಿತ್ರದುರ್ಗ | 114 | 114 | 191 | 170 | 120 | 189 | 137 | 181 | 120 | 13 | 1235 | 433 |
| 13 | ದಕ್ಷಿಣ ಕನ್ನಡ | 169 | 169 | 203 | 202 | 174 | 213 | 173 | 210 | 173 | 12 | 1529 | 603 |
| 14 | ದಾವಣಗೆರೆ | 133 | 133 | 269 | 209 | 149 | 226 | 197 | 226 | 137 | 17 | 1563 | 515 |
| 15 | ಧಾರವಾಡ | 108 | 108 | 199 | 128 | 91 | 179 | 105 | 171 | 109 | 14 | 1104 | 430 |
| 16 | ಗದಗ | 113 | 113 | 176 | 147 | 81 | 166 | 108 | 159 | 114 | 8 | 1072 | 416 |
| 17 | ಹಾಸನ | 241 | 241 | 318 | 313 | 293 | 320 | 296 | 316 | 244 | 8 | 2349 | 788 |
| 18 | ಹಾವೇರಿ | 141 | 141 | 338 | 206 | 110 | 248 | 198 | 248 | 142 | 12 | 1643 | 538 |
| 19 | ಕಲಬುರಗಿ | 293 | 293 | 576 | 406 | 202 | 489 | 295 | 471 | 295 | 20 | 3047 | 1010 |
| 20 | ಕೊಡಗು | 47 | 47 | 54 | 54 | 49 | 55 | 49 | 55 | 47 | 2 | 412 | 155 |
| 21 | ಕೋಲಾರ್ | 125 | 125 | 196 | 187 | 149 | 205 | 156 | 197 | 128 | 19 | 1362 | 485 |
| 22 | ಕೊಪ್ಪಳ | 161 | 161 | 249 | 218 | 148 | 280 | 154 | 253 | 173 | 38 | 1674 | 737 |
| 23 | ಮಂಡ್ಯ | 214 | 214 | 264 | 248 | 226 | 269 | 225 | 265 | 217 | 11 | 1939 | 710 |
| 24 | ಮೈಸೂರು | 232 | 232 | 308 | 297 | 249 | 350 | 249 | 331 | 236 | 32 | 2284 | 927 |
| 25 | ರಾಯಚೂರು | 214 | 214 | 402 | 301 | 199 | 397 | 230 | 362 | 230 | 64 | 2399 | 1022 |
| 26 | ರಾಮನಗರ | 107 | 107 | 179 | 143 | 117 | 164 | 127 | 159 | 109 | 6 | 1111 | 365 |
| 27 | ಶಿವಮೊಗ್ಗ | 164 | 164 | 371 | 258 | 196 | 307 | 240 | 304 | 169 | 22 | 2031 | 642 |

| | | | | | | | | | | | | | |
|---|---|---|---|---|---|---|---|---|---|---|---|---|---|
| 28 | ತುಮಕೂರು ಮಧುಗಿರಿ | 132 | 132 | 191 | 180 | 146 | 191 | 152 | 187 | 138 | 18 | 1335 | 486 |
| 29 | ತುಮಕೂರು | 95 | 95 | 131 | 127 | 109 | 138 | 113 | 134 | 99 | 10 | 956 | 357 |
| 30 | ಉಡುಪಿ | 106 | 106 | 170 | 170 | 159 | 182 | 158 | 178 | 113 | 19 | 1255 | 432 |
| 31 | ಉತ್ತರ ಕನ್ನಡ | 49 | 48 | 95 | 59 | 44 | 74 | 56 | 74 | 48 | 3 | 501 | 168 |
| 32 | ಉತ್ತರ ಕನ್ನಡ ಸಿರಸಿ | 74 | 74 | 136 | 98 | 68 | 127 | 86 | 122 | 78 | 13 | 802 | 315 |
| 33 | ವಿಜಯಪುರ | 153 | 153 | 347 | 227 | 128 | 300 | 184 | 286 | 157 | 22 | 1804 | 640 |
| 34 | ಯಾದಗಿರಿ | 122 | 122 | 242 | 186 | 117 | 245 | 157 | 228 | 129 | 31 | 1457 | 572 |
| | ಒಟ್ಟು | 4722 | 4719 | 8115 | 6509 | 4723 | 7789 | 5448 | 7462 | 4877 | 683 | 50325 | 18724 |

SATS



| ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಜಿಲ್ಲಾವಾರು ಶಿಕ್ಷಕರ ಮಕ್ಕಳ ಅನುಪಾತದ ಮತ್ತು ಜಿಲ್ಲಾವಾರು ಖಾಲಿ ಹುದ್ದೆಗಳ ವಿವರ | | | | | | | | |
|---|---|---|---|---|---|---|---|---|
| ಕ್ರ. ಸಂ | ಜಿಲ್ಲೆಯ ಹೆಸರು | ಶಿಕ್ಷಕರ ಮಕ್ಕಳ ಅನುಪಾತ ಹುದ್ದೆ ಮಂಜೂರಾತಿಗೆ | | | ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರ ಮಕ್ಕಳ ಅನುಪಾತ | | | ಪ್ರಾಥಮಿಕ ಖಾಲಿ ಹುದ್ದೆ |
| | | ಕಿ.ಪ್ರಾ.ಶಾ | ಹಿ.ಪ್ರಾ.ಶಾ | ಪ್ರಾ.ಶಾ | ಕಿ.ಪ್ರಾ ಶಾ | ಹಿ.ಪ್ರಾ ಶಾ | ಪ್ರಾ ಶಾ | ಖಾಲಿ ಹುದ್ದೆ |
| 1 | ಬಾಗಲಕೋಟೆ | 13.99 | 23.77 | 22.2 | 16.79 | 27.99 | 26.23 | 856 |
| 2 | ಬಳ್ಳಾರಿ | 19.91 | 29.78 | 28.01 | 24.42 | 36.98 | 34.7 | 1278 |
| 3 | ಬೆಳಗಾವಿ | 13.58 | 22.44 | 20.87 | 15.23 | 25.49 | 23.65 | 622 |
| 4 | ಬೆಳಗಾವಿ ಚಿಕ್ಕೋಡಿ | 13.88 | 24.74 | 22.58 | 18.92 | 31.03 | 28.78 | 1642 |
| 5 | ಬೆಂಗಳೂರು ಗ್ರಾಮಾಂತರ | 7.78 | 15.16 | 12.32 | 8.57 | 17.06 | 13.75 | 229 |
| 6 | ಬೆಂಗಳೂರು ಉತ್ತರ | 13.99 | 27.96 | 24.73 | 14.66 | 30.85 | 26.96 | 110 |
| 7 | ಬೆಂಗಳೂರು ದಕ್ಷಿಣ | 14.99 | 26.33 | 23.73 | 16.98 | 29.92 | 26.94 | 331 |
| 8 | ಬೀದರ್ | 9.38 | 16.04 | 14.69 | 12.54 | 19.32 | 18.05 | 998 |
| 9 | ಚಾಮರಾಜನಗರ | 10.1 | 17.32 | 15.65 | 11.72 | 20.04 | 18.12 | 313 |
| 10 | ಚಿಕ್ಕಬಳ್ಳಾಪುರ | 7.85 | 13.73 | 11.36 | 9.49 | 17.19 | 14.02 | 744 |
| 11 | ಚಿಕ್ಕಮಗಳೂರು | 6.87 | 10.19 | 9.24 | 8.09 | 12.26 | 11.05 | 668 |
| 12 | ಚಿತ್ರದುರ್ಗ | 11.09 | 18.2 | 16.29 | 11.95 | 20.12 | 17.88 | 321 |
| 13 | ದಕ್ಷಿಣ ಕನ್ನಡ | 9.79 | 16.76 | 15.89 | 11.98 | 19.31 | 18.45 | 444 |
| 14 | ದಾವಣಗೆರೆ | 9.62 | 14.55 | 13.37 | 10.06 | 14.98 | 13.81 | 51 |
| 15 | ಧಾರವಾಡ | 17.24 | 24.42 | 23.55 | 18.15 | 26.87 | 25.76 | 232 |
| 16 | ಗದಗ | 16.33 | 22.2 | 21.29 | 18.28 | 25.79 | 24.59 | 372 |
| 17 | ಹಾಸನ | 6.34 | 10.41 | 8.91 | 7.41 | 13.1 | 10.9 | 1116 |
| 18 | ಹಾವೇರಿ | 15.43 | 22.72 | 21.38 | 16.39 | 24.77 | 23.2 | 229 |
| 19 | ಕಲಬುರಗಿ | 14.31 | 21.78 | 20.15 | 17.33 | 27.76 | 25.38 | 1675 |
| 20 | ಕೊಡಗು | 5.38 | 10.83 | 9.94 | 7.36 | 14.06 | 13.01 | 373 |
| 21 | ಕೋಲಾರ್ | 8.84 | 13.64 | 11.6 | 9.73 | 15.7 | 13.09 | 427 |
| 22 | ಕೊಪ್ಪಳ | 20.27 | 26.61 | 25.4 | 24.74 | 34.18 | 32.31 | 1045 |
| 23 | ಮಂಡ್ಯ | 7.03 | 12.63 | 10.94 | 8.83 | 16.64 | 14.2 | 1118 |
| 24 | ಮೈಸೂರು | 10.54 | 17.65 | 15.75 | 11.69 | 20.02 | 17.76 | 576 |
| 25 | ರಾಯಚೂರು | 16.4 | 24.97 | 22.87 | 22.77 | 33.43 | 30.88 | 1890 |
| 26 | ರಾಮನಗರ | 7.25 | 12.75 | 10.46 | 9.41 | 16.31 | 13.46 | 792 |
| 27 | ಶಿವಮೊಗ್ಗ | 10.33 | 15.03 | 13.72 | 11.62 | 16.06 | 14.87 | 247 |
| 28 | ತುಮಕೂರು | 8.72 | 15.89 | 12.86 | 9.07 | 17.2 | 13.68 | 119 |
| 29 | ತುಮಕೂರು ಮಧುಗಿರಿ | 10.73 | 17.2 | 14.9 | 11.52 | 18.72 | 16.14 | 146 |
| 30 | ಉಡುಪಿ | 8.5 | 17.11 | 15.25 | 10.57 | 18.7 | 17.11 | 174 |
| 31 | ಉತ್ತರ ಕನ್ನಡ | 8.58 | 12.7 | 11.5 | 9.28 | 13.71 | 12.43 | 115 |
| 32 | ಉತ್ತರ ಕನ್ನಡ ಸಿರಸಿ | 10.42 | 17.85 | 15.39 | 13.5 | 21.93 | 19.23 | 595 |
| 33 | ವಿಜಯಪುರು | 14.43 | 24.98 | 22.69 | 15.3 | 28.96 | 25.78 | 770 |
| 34 | ಯಾದಗಿರಿ | 21.84 | 28.63 | 27.01 | 27.94 | 42.06 | 38.32 | 1294 |
| | ಒಟ್ಟು | **11.48** | **20.06** | **17.89** | **13.38** | **23.73** | **21.09** | **21811** |

6.3.2020.

ಕರ್ನಾಟಕ ಸರ್ಕಾರ

ಸಂಖ್ಯೆ: ಇಡಿ 63 ಟಿಇಸಿ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ, 2ನೇ ಗೇಟ್, 6ನೇ ಮಹಡಿ,
ಬೆಂಗಳೂರು, ದಿನಾಂಕ:12-03-2020

158
U/S
12/03/2020

ಇವರಿಗೆ:-

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ- ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಹೆಚ್.ಡಿ.ರೇವಣ್ಣ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1605ಕ್ಕೆ ಉತ್ತರಿಸುವ ಕುರಿತು.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಹೆಚ್.ಡಿ ರೇವಣ್ಣ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1605ಕ್ಕೆ ಸಂಬಂಧಿಸಿದ ಉತ್ತರದ 350 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಶೋಭಾ ಮ ತುಪ್ಪದ)
ಶಾಖಾಧಿಕಾರಿ,
ಉನ್ನತ ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1650 |
| ಮಾನ್ಯ ಸದಸ್ಯರ ಹೆಸರು | : ಶ್ರೀ ರೇವಣ್ಣ ಹೆಚ್.ಡಿ (ಹೊಳೇನರಸೀಪುರ) |
| ಉತ್ತರಿಸುವ ದಿನಾಂಕ | : 12.03.2020 |
| ಉತ್ತರಿಸುವ ಸಚಿವರು | : ಮಾನ್ಯ ಉಪ ಮುಖ್ಯಮಂತ್ರಿಗಳು. (ಉನ್ನತ ಶಿಕ್ಷಣ, ಐಟಿ&ಬಿಟಿ.ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ. ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ) |

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಹಾಸನ ಜಿಲ್ಲೆಯ ಮೊಸಳೆಹೊಸಹಳ್ಳಿ ಗ್ರಾಮದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜನ್ನು 2019-20ನೇ ಸಾಲಿನಿಂದ ತೆರೆದಿರುವುದರಿಂದ ಆ ಕಾಲೇಜಿನಲ್ಲಿ 173 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದು, ಅದರಲ್ಲಿ 173 ವಿದ್ಯಾರ್ಥಿಗಳಲ್ಲಿ ಈಗಾಗಲೇ 165 ವಿದ್ಯಾರ್ಥಿಗಳಿಗೆ ಸರ್ಕಾರದ ವಿವಿದ ವಿದ್ಯಾರ್ಥಿ ವೇತನಗಳು ಬಂದಿರುವುದು ನಿಜವೇ; ಜಿಂದಾಲ್ ಸಂಸ್ಥೆಯಿಂದ 8 ವಿದ್ಯಾರ್ಥಿಗಳಿಗೆ 4 ವರ್ಷಗಳ ಕಾಲ ಸಂಪೂರ್ಣ ವಿದ್ಯಾಭ್ಯಾಸದ ಖರ್ಚುಗಳನ್ನು ವಹಿಸಿಕೊಂಡಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು)</td><td>ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಮೊಸಳೆಹೊಸಹಳ್ಳಿ, ಈ ಕಾಲೇಜಿನ ಕೆಳಕಂಡ ವಿದ್ಯಾರ್ಥಿಗಳಿಗೆ ವಿವಿಧ ವಿದ್ಯಾರ್ಥಿ ವೇತನವನ್ನು ನೀಡಿರುವ ವಿವರ:-
<table>
<tr><th>ಕ್ರಸ</th><th>ವಿದ್ಯರ್ಥಿ ವೇತನ</th><th>ವಿದ್ಯಾರ್ಥಿ ಸಂಖ್ಯೆ</th><th>ಷರಾ</th></tr>
<tr><td>01</td><td>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿದ್ಯಾರ್ಥಿ ವೇತನ</td><td>105</td><td>ಪ್ರತಿ ವಿದ್ಯಾರ್ಥಿಗೆ ರೂ.19,090/-ಗಳನ್ನು ಮಂಜೂರು ಮಾಡುವ ಬಗ್ಗೆ</td></tr>
<tr><td>02</td><td>ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ವಿದ್ಯಾರ್ಥಿ ವೇತನ</td><td>34</td><td>ಎಸ್ಎಸ್‌ಪಿ ಪೋರ್ಟಲ್‌ನಲ್ಲಿ ಅರ್ಜಿ ಸಲ್ಲಿಸಲಾಗಿದ್ದು, ಮಂಜೂರಾತಿ ಹಂತದಲ್ಲಿದೆ.</td></tr>
<tr><td>03</td><td>ಅಲ್ಪ ಸಂಖ್ಯಾತ ಇಲಾಖೆಯಿಂದ ವಿದ್ಯಾರ್ಥಿಗಳ ವೇತನ</td><td>05</td><td>ಎಸ್ಎಸ್‌ಪಿ ಪೋರ್ಟಲ್‌ನಲ್ಲಿ ಅರ್ಜಿ ಸಲ್ಲಿಸಲಾಗಿದ್ದು, ಮಂಜೂರಾತಿ ಹಂತದಲ್ಲಿದೆ.</td></tr>
<tr><td></td><td></td><td>144</td><td></td></tr>
</table>
ಉಳಿದ ವಿದ್ಯಾರ್ಥಿಗಳು ವಿದ್ಯಾರ್ಥಿ ವೇತನಕ್ಕೆ ಅರ್ಜಿ ಸಲ್ಲಿಸಿದ್ದು, ಪರಿಶೀಲನೆಯಲ್ಲಿರುತ್ತದೆ.<br>
2019-20ನೇ ಸಾಲಿನ 8 ವಿದ್ಯಾರ್ಥಿಗಳು ಜಿಂದಾಲ್ ಫೌಂಡೇಶನ್ ವಿದ್ಯಾರ್ಥಿ ವೇತನಕ್ಕೆ ಅರ್ಜಿ ಸಲ್ಲಿಸಿದ್ದು, ಅದರಲ್ಲಿ 04 ವಿದ್ಯಾರ್ಥಿಗಳಿಗೆ ಮಂಜೂರಾಗಿದ್ದು, ಇನ್ನುಳಿದ 04 ವಿದ್ಯಾರ್ಥಿಗಳಿಗೆ ಮಂಜೂರು ಮಾಡುವ ಹಂತದಲ್ಲಿರುತ್ತದೆ.</td></tr>
<tr><td>ಆ)</td><td>ಸದರಿ ಹಾಸನ ಜಿಲ್ಲೆಯ ಮೊಸಳೆಹೊಸಹಳ್ಳಿ ಗ್ರಾಮದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಎಐಸಿಟಿಇ ನಿಯಮಾನುಸಾರ ಪ್ರಕಾರ ಅಗತ್ಯವಾಗಿರುವ ಮೂಲಭೂತ ಸೌಕರ್ಯಗಳಾದ ಕಂಪ್ಯೂಟರ್ ಲ್ಯಾಬ್ ಹಾಗೂ ಕಂಪ್ಯೂಟರ್ ಪ್ರಿಂಟರ್, ಕಂಪ್ಯೂಟರ್ ಟೇಬಲ್‌ಗಳು ಹಾಗೂ ಇನ್ನಿತರ ಸಾಮಗ್ರಿಗಳು ವಿದ್ಯಾರ್ಥಿಗಳಿಗೆ</td><td>ಹೌದು<br>
ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಮೊಸಳೆಹೊಸಹಳ್ಳಿ ಸಂಸ್ಥೆಗೆ ಪ್ರಾಥಮಿಕ ಹಂತವಾಗಿ ಈ ಕೆಳಕಂಡಂತೆ ಮೂಲಭೂತ ಸೌಕರ್ಯ ಒದಗಿಸಲಾಗಿದ್ದು, ಇನ್ನುಳಿದ ಸೌಲಭ್ಯವನ್ನು ಹಂತ ಹಂತವಾಗಿ ಒದಗಿಸಲು ಕ್ರಮ ಕೈಗೊಳ್ಳಲಾಗಿದೆ.<br>
1. ಡೆಸ್ಕ್‌ಟಾಪ್ ಕಂಪ್ಯೂಟರ್, ಪ್ರಿಂಟರ್ & ಯುಪಿಎಸ್ :<br>
2018-19 ನೇ ಸಾಲಿನಲ್ಲಿ 50 ಡೆಸ್ಕ್‌ಟಾಪ್ ಕಂಪ್ಯೂಟರ್‌ಗಳನ್ನು, 01 5 ಕೆವಿಎ ಯುಪಿಎಸ್ ಮತ್ತು 02 ಪ್ರಿಂಟರ್‌ಗಳನ್ನು ಒದಗಿಸಲಾಗಿದೆ.</td></tr>
</table>

| | |
|---|---|
| ಕುಳಿತುಕೊಳ್ಳಲು ಬೇಕಾಗುವ ಡೆಸ್ಕಗಳು, ಗ್ರಂಥಾಲಯದಲ್ಲಿ ಅಗತ್ಯವಿರುವ ಮಸ್ತಕಗಳು ಹಾಗೂ ಇನ್ನಿತರೆ ಮೂಲಭೂತ ಸೌಕರ್ಯಗಳು ಲಭ್ಯವಿಲ್ಲದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕೂಡಲೇ ಹಾಸನ ಜಿಲ್ಲೆಯ ಮೊಸಳೆಹೊಸಹಳ್ಳಿ ಗ್ರಾಮದಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಎಐಸಿಟಿಇ ನಿಯಮಾನುಸಾರ ಪ್ರಕಾರ ಮೇಲ್ಕಂಡ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಸರ್ಕಾರ ಕ್ರಮಕೈಗೊಳ್ಳುವುದೆ;ಹಾಗೂ ಅವಶ್ಯಕತೆ ಅನುದಾನ ಬಿಡುಗಡೆ ಮಾಡಲು ಕ್ರಮಕೈಗೊಂಡ; (ಸಂಪೂರ್ಣ ಮಾಹಿತಿ ನೀಡುವುದು) | 2. ಲ್ಯಾಬ್ ಉಪಕರಣಗಳು ಹಾಗೂ ಗ್ರಂಥಾಲಯ ಪುಸ್ತಕ:<br>2018-19 ನೇ ಸಾಲಿನಲ್ಲಿ ರೂ.23.00 ಲಕ್ಷಗಳಲ್ಲಿ ಸಂಸ್ಥೆಯಲ್ಲಿ ಪ್ರಥಮ ವರ್ಷ ಪ್ರಾರಂಭಿಸಲು ಅಗತ್ಯವಿರುವ 05 ಪ್ರಯೋಗಾಲಯಗಳಿಗೆ ಲ್ಯಾಬ್ ಉಪಕರಣಗಳು ಹಾಗೂ 1236 ವಾಲ್ಯೂಂ, 50 ಟೈಟಲ್‌ಗಳ ಪುಸ್ತಕಗಳನ್ನು ಖರೀದಿಸಲಾಗಿರುತ್ತದೆ.<br><br>3. 2019-20 ನೇ ಸಾಲಿನಲ್ಲಿ ರೂ.51.5 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಿದ್ದು, ಸದರಿ ಮೊತ್ತದಲ್ಲಿ ರೂ. 19,78,742/--ಗಳ ಮೊತ್ತದಲ್ಲಿ ಪ್ರಾಂಶುಪಾಲರು, ಖರೀದಿಸಿರುತ್ತಾರೆ.<br><br>1) 60 ಸ್ಟೂಡೆಂಟ್ ಡೆಸ್ಕ್‌ಗಳನ್ನು<br>2) 30 ಕಂಪ್ಯೂಟರ್ ಟೇಬಲ್‌ಗಳು<br>3) 10 ಲ್ಯಾಬ್ ಟೇಬಲ್‌ಗಳು<br>4) 20 ಆಫೀಸ್ ಟೇಬಲ್‌ಗಳನ್ನು<br><br>ಮುಂದುವರಿದು ಇ-ಪ್ರಕ್ಯೂರ್‌ಮೆಂಟ್ ಮೂಲಕ ರೂ.3,99,546/- ಗಳಲ್ಲಿ ಗ್ರಂಥಾಲಯಕ್ಕೆ ಪುಸ್ತಗಳನ್ನೂ ಹಾಗೂ ರೂ.15,42,400/- ರೂಗಳಲ್ಲಿ 03 ಮತ್ತು 04ನೇ ಸೆಮಿಸ್ಟರ್‌ಗಳ ಪ್ರಯೋಗಾಲಯಗಳಿಗೆ ಬೇಕಾದ ಭಾಗಶ: ಪ್ರಯೋಗಾಲಯ ಉಪಕರಣಗಳನ್ನು ಖರೀದಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ.<br><br>4. 2019-20ನೇ ಸಾಲಿನಲ್ಲಿ ಸರ್ಕಾರಿ ಇಂಜಿನೀಯರಿಂಗ್ ಕಾಲೇಜು- ಮೊಸಳೆಹೊಸಹಳ್ಳಿ ಸಂಸ್ಥೆಗೆ 80 ಸ್ಟೂಡೆಂಟ್ ಡೆಸ್ಕ್, 50 ಕಂಪ್ಯೂಟರ್ ಟೇಬಲ್ ಹಾಗೂ 50 ಕಂಪ್ಯೂಟರ್ ಕುರ್ಚಿಗಳ ಸರಬರಾಜು ಪ್ರಕ್ರಿಯೆ ಪ್ರಗತಿಯಲ್ಲಿದೆ.<br><br>5. 2019-20 ನೇ ಸಾಲಿನಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಮೊಸಳೆಹೊಸಹಳ್ಳಿ ಸಂಸ್ಥೆಯೂ ಸೇರಿದಂತೆ 12 ಸರ್ಕಾರಿ ಇಂಜಿನೀಯರಿಂಗ್ ಕಾಲೇಜುಗಳು ಮತ್ತು 38 ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ 50 62.5 ಕೆವಿಎ 03 ಫೇಸ್ ಡಿಸೆಲ್ ಜನರೇಟರ್ ವಿದ್ಯೂಲ್ಡ್‌ಗಳನ್ನು ಒದಗಿಸಲು ಕಾಯಾದೇಶ ನೀಡಲಾಗಿದ್ದು, ಸರ್ಕಾರಿ ಇಂಜಿನೀಯರಿಂಗ್ ಕಾಲೇಜು, ಮೊಸಳೆಹೊಸಹಳ್ಳಿ<br><br>ಸಂಸ್ಥೆಗೂ 01(ಒಂದು) 62.5 ಕೆವಿಎ 03 ಫೇಸ್ ಡಿಸೆಲ್ ಜನರೇಟರ್ ವಿದ್ಯೂಲ್ಡ್ ಸರಬರಾಜಾಗುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |

